ವರದರಾಜ ಪ್ರಕಾಶನ-ನಂ 52

# ಶುಭಂ ಭವತು

( ಸಾಲಿಗ್ರಾಮ, ತುಳಸಿ, ಶಂಖ, ಓಂಕಾರಗಳ ಮಾಹಿತಿಯನ್ನು ಸೂಚಿಸುವ ಗ್ರಂಥ )

ಲೇಖಕರು:
ಕನ್ನಡ ಕುಲಭೂಷಣ-ವಿದ್ಯಾಭೂಷಣ
ದಾಸ ಸಾಹಿತ್ಯ ಪ್ರದೀಪ, ಸಾಹಿತ್ಯ ಚಿಂತಾಮಣಿ

## ಆದ್ಯರಾಮಾಚಾರ್ಯ

ಪ್ರಕಾಶಕರು

**ವರದರಾಜ ಪ್ರಕಾಶನ**

ನಂ 114, ವೈ, 4ನೇ ಮೇನ್ 4ನೇ ಫೇಸ್
ಏಳನೇ ಬ್ಲಾಕ್, ಬನಶಂಕರಿ ಮೂರನೇ ಹಂತ
ಬೆಂಗಳೂರು - 560 085
ದೂರವಾಣಿ : 6692139

ಶುಭಂ ಭವತು, ಸಾಲಿಗ್ರಾಮ, ತುಳಸಿ, ಶಂಖ, ಓಂಕಾರಗಳ ಮಾಹಿತಿಯನ್ನು ಸೂಚಿಸುವ ಗ್ರಂಥ. ಲೇಖಕರು : ಶ್ರೀ ಆದ್ಯ ರಾಮಾಚಾರ್ಯ
"**SHUBHAM BHAVATU**" - Saligrama, Tulasi, Shanka, Omkara (This book is written by **Sri Adya Ramacharya.**

ಪ್ರಥಮ ಮುದ್ರಣ - 1996, ಪ್ರತಿಗಳು - 1000

First Edition - 1996, Copies- 1000


ಬೆಲೆ : **30-00** ಮೂವತ್ತು ರೂಪಾಯಿಗಳು

ಪುಟಗಳು : 85 + xxi

Phone : 6692139

ಪ್ರಕಾಶಕರು : ವರದರಾಜ ಪ್ರಕಾಶನ,
ನಂ. 144: ವೈ, ನಾಲ್ಕನೇ ಮ್ಯೆನ್, 4ನೇ ಫೇಸ್, 7ನೇ ಬ್ಲಾಕ್,
ಬನಶಂಕರಿ ಮೂರನೇ ಹಂತ , ಬೆಂಗಳೂರು - 560 085

Publishers: **Varadaraja Prakashana,**
No. 114-Y, 4th Main Road, 4th Phase, 7th Block,
Banashankari 3rd Stage, Bangalore - 560 085

ಮುದ್ರಕರು : ಸತ್ಯಶ್ರೀ ಪ್ರಿಂಟರ್ಸ್, ಚಮರಾಜಪೇಟೆ, ಬೆಂಗಳೂರು-18, ಫೋನ್ : 625736

ಈ ಗ್ರಂಥದ ಪ್ರಥಮ ಮುದ್ರಣಕ್ಕೆ ತಿರುಮಲೆ ತಿರುಪತಿ ದೇವಸ್ಥಾನದಿಂದ ಧನಸಹಾಯ ಲಭ್ಯ.

**THIS BOOK PRINTED AND PUBLISHED WITH THE KIND HELP OF THE OFFICE OF THE T.T.D. SHREE VENKATE-SHWARA SWAMY DEVASTANAM, TIRUPATHI.**

**UNDER THEIR SCHEME AID TO PUBLISH RELIGIOUS BOOKS.**

# ಸಮರ್ಪಣೆ

ಕರ್ನಾಟಕ ರಾಜ್ಯದ ಜನಪ್ರಿಯ ಪ್ರಕಟಣೆಗಳಾದ ಸಂಯುಕ್ತ ಕರ್ನಾಟಕ, ದಿನಪತ್ರಿಕೆ–ಕರ್ಮವೀರ ವಾರ ಪತ್ರಿಕೆ–ಕಸ್ತೂರಿ ಮಾಸಪತ್ರಿಕೆಗಳೊಂದಿಗೆ ವಿಚಾರ ಪೂರಿತ ರಚನಾತ್ಮಕ ಗ್ರಂಥಗಳನ್ನು ವಾಚಕರಿಗೆ ಒದಗಿಸುತ್ತ ಬಂದಿರುವ ಕನ್ನಡಿಗರೆಲ್ಲರ ಹೆಮ್ಮೆಯ ಸಂಸ್ಥೆಯಾದ, ಲೋಕ ಶಿಕ್ಷಣ ಸಂಸ್ಥೆಯ ಕಾರ್ಯ ನಿರ್ವಾಹಕರಾಗಿ, ಆ ಸಂಸ್ಥೆಯನ್ನು ಪುನರುಜ್ಜೀವನಗೊಳಿಸಲು ತಮ್ಮ ಬಾಳಿನ ಬಹುಪಾಲನ್ನು ಸಮರ್ಪಿಸಿದ, ಪತ್ರಿಕಾಪಿತಾಮಹರೆನಿಸಿಕೊಳ್ಳುವ ಶ್ರೀ ಕೆ. ಶ್ಯಾಮರಾವ್ ಇವರ ಸೇವೆಯ ಸ್ಮರಣೆಗಾಗಿ ಈ ಕಿರು ಹೊತ್ತಿಗೆಯನ್ನು ಅರ್ಪಿಸಲಾಗಿದೆ.

ಆಶ್ವೀಜ ಶುಕ್ಲಪಕ್ಷ
21.10.1996
ವಿಜಯದಶಮಿ

ಆದ್ಯರಾಮಾಚಾರ್ಯ

# ಪ್ರಕಾಶಕರ ಬಿನ್ನಹ

ವರದರಾಜ ಪ್ರಕಾಶನ ಸಂಸ್ಥೆಯು 1975ರಿಂದ ಇಂದಿನವರೆಗೆ ಇಪ್ಪತೊಂದು ವರುಷಗಳಕಾಲ ಅವ್ಯಾಹತವಾಗಿ ಸಾಹಿತ್ಯ ಸೇವೆಯನ್ನು ಮಾಡುತ್ತಬಂದಿದೆ. ಭಾರತದ ಪ್ರಾಚೀನ ಇತಿಹಾಸದ ಮೇಲೆ ಅನೇಕ ಕಾದಂಬರಿಗಳನ್ನೀಯುತ್ತಲಿದೆ. ಅದೇ ರೀತಿ ಮಹಾಭಾರತದ ಪಾತ್ರಗಳನ್ನಾಯ್ದು ಅನೇಕ ಕಾದಂಬರಿಗಳನ್ನು ಕನ್ನಡ ಸಾಹಿತ್ಯ ಲೋಕಕ್ಕೆ ಅರ್ಪಿಸಲಾಗಿದೆ. ದಾಸ ಸಾಹಿತ್ಯದ ಕೃತಿಗಳೂ ಹೊರಬಂದಿವೆ.

"ಶುಭಂ ಭವತು" ಶ್ರೀ ಪಂಡಿತ ಆದ್ಯರಾಮಾಚಾರ್ಯರಿಂದ ಎಪ್ಪತ್ತನೆ ವರುಷದಲ್ಲಿ ರಚಿತವಾದ ಐವತ್ತೆರಡನೆಯ ಕೃತಿಯನ್ನು ನಾಡಿನ ಸಾರಸ್ವತ ಲೋಕಕ್ಕೆ ಅರ್ಪಿಸಲು ಸಮಾಧಾನವೆನಿಸುತ್ತಿದೆ. ಎಂದಿನಂತೆ ವಾಚಕರು ಸಹಕರಿಸಬೇಕಾಗಿ ಕೇಳಿಕೊಳ್ಳುತ್ತೇವೆ.

ತಮ್ಮ

ವಿಜಯಲಕ್ಷ್ಮಿ, ವಸುಧಾ ಆದ್ಯ

# ಮುನ್ನುಡಿ

ಪಂಡಿತ ಆದ್ಯ ರಾಮಾಚಾರ್ಯರು ಜನಪ್ರಿಯ ಸಾಹಿತಿಗಳು ಮಾತ್ರವಲ್ಲ, ಪ್ರಖ್ಯಾತ ವಿದ್ವಾಂಸರೂ ಹೌದು ಎನ್ನುವುದಕ್ಕೆ ಅವರ ರಾಧೇಯ, ಧನಂಜಯ, ಜೈಭವಾನಿ ಮುಂತಾದ ಗ್ರಂಥಗಳೇ ಸಾಕ್ಷಿ. ಜಟಿಲವಾದ ಆಧ್ಯಾತ್ಮಿಕ ವಿಚಾರಗಳನ್ನು ಕೂಲಂಕುಷವಾಗಿ ಪರಿಶೀಲಿಸಿ, ಸಾಮಾನ್ಯ ಜನರಿಗೆ ತಿಳಿಯುವಂತೆ ಬರೆಯುವ ಲೇಖಕರು ಅತಿ ವಿರಳ. ಅಂತಹ ಮಹನೀಯರಲ್ಲಿ ಆದ್ಯ ವಂಶದ ಪಂಡಿತ ಸೇತುರಾಮಾಚಾರ್ಯರ ಪುತ್ರರಾದ ಆದ್ಯ ರಾಮಾಚಾರ್ಯರು ಪ್ರಮುಖರು. ಪೌರಾಣಿಕ ಗ್ರಂಥಗಳನ್ನು ಜನಪ್ರಿಯಗೊಳಿಸಿದ ಕೀರ್ತಿಯು ಇವರಿಗೆ ಸಲ್ಲಬೇಕು.

ಪ್ರಸ್ತುತ ಈ ಗ್ರಂಥದಲ್ಲಿ ಮಾನವನ ಆಧ್ಯಾತ್ಮಿಕ ಏಳಿಗೆಗೆ ಸಹಾಯಕವಾಗುವ ಓಂಕಾರ ನಾದದ ಮಹಿಮೆ, ಸನಾತನ ಸಂಪ್ರದಾಯವಂತರ ಸಾಧನೆಗೆ ಸಹಾಯಕವಾಗುವ ಶಂಖ, ಸಾಲಗ್ರಾಮ (ಶಾಲಿಗ್ರಾಮ) ಹಾಗೂ ತುಳಸಿ ಇವುಗಳ ಮಹಿಮೆಯನ್ನು ಉಪನಿಷತ್ತು, ಪುರಾಣಗಳ ಆಧಾರದಿಂದ ಕೂಲಂಕುಷವಾಗಿ ಚರ್ಚಿಸಿ, ಜನಸಾಮಾನ್ಯರಿಗೂ ತಿಳಿಯುವಂತೆ ಸರಳ ಸುಲಲಿತ ಭಾಷೆಯಲ್ಲಿ ಬಿಡಿಸಿ ಹೇಳಿದ ರಾಮಾಚಾರ್ಯರು ಸಾರ್ವಕಾಲಿಕವಾದ ಸೇವೆಯನ್ನು ಸಲ್ಲಿಸಿದ್ದಾರೆ.

ಓಂಕಾರವು ಯೋಗಾಭ್ಯಾಸದಲ್ಲಿ ಬಹು ಪ್ರಾಮುಖ್ಯತೆಯನ್ನು ಪಡೆದು

ಉದ್ಗೀತವೆಂದು ಹೆಸರಾಗಿದೆ. ಅದು ಪರಬ್ರಹ್ಮನನ್ನು ಕುರಿತು ಅತ್ಯುತ್ತಮ ಸ್ತೋತ್ರವಾದುದು ಎಂದು ರಾಮಾಚಾರ್ಯರು ಗುರುತಿಸಿರುವುದು ಸಮಂಜಸವಾಗಿದೆ.

ಸಾಲಿಗ್ರಾಮವೆಂದು ಹೆಸರಾದ ಕಪ್ಪುಕಲ್ಲಿನಲ್ಲಿ ವಜ್ರಕೀಟಗಳ ಕುರುಹು (ಚಕ್ರಾಂಕಿತಗಳು)ಗಳನ್ನು ಕಾಣಬಹುದು. ಆ ಕುರುಹುಗಳಿದ್ದ ಮಾತ್ರಕ್ಕೆ ಅವು ಪೂಜನೀಯವೆ ಎಂದು ಪ್ರಶ್ನೆ ಮೂಡುತ್ತದೆ. ಸಾಲಿಗ್ರಾಮಗಳಲ್ಲಿ ಅಮೋನೈಟ್ (Ammonite) ಎಂಬ ಜೀವತಂತುವಿನ ಕುರುಹುಗಳಿರುವುದು ಸಿದ್ಧವಾಗಿದೆ. ಈ ಮಾದರಿಯ ಚಕ್ರ ಮತ್ತು ಪದ್ಮಗಳ ಕುರುಹುಗಳುಳ್ಳ ಅವಶೇಷಗಳು ದ್ವಾರಕಾ ಸಮುದ್ರದಲ್ಲಿಯೂ ದೊರಕುತ್ತವೆ. ಇದರಿಂದಲೇ, ಶ್ರೀ ಕೃಷ್ಣನು ದ್ವಾರಕೆಯನ್ನು ವಿಶ್ವಕರ್ಮನಿಂದ ನಿರ್ಮಿಸಿದನೆಂಬ ಪ್ರತೀತಿ. ಆದುದರಿಂದಲೇ ದ್ವಾರಕೆ ಚತುರ್ಧಾಮಗಳಲ್ಲಿ ಒಂದೆನಿಸಿದೆ. ಸೂಕ್ಷ್ಮ ಜೀವತಂತುಗಳಲ್ಲಿ ಅನೇಕ ವೈವಿಧ್ಯಗಳಿದ್ದು ಅವುಗಳನ್ನು ವಾಸುದೇವ ಸಾಲಿಗ್ರಾಮ, ನರಸಿಂಹ ಸಾಲಿಗ್ರಾಮ ಇತ್ಯಾದಿ ನಾಮಧೇಯಗಳಿಂದ ಗುರುತಿಸುತ್ತಾರೆ. ಅದರ ದೀರ್ಘವಿವರಣೆ ಆಚಾರ್ಯರ ಗ್ರಂಥದಲ್ಲಿದೆ. ಅವುಗಳನ್ನು ಪೂಜಿಸುವ ಮುಖ್ಯ ಉದ್ದೇಶವೆಂದರೆ ಪರಮಾತ್ಮನ ಸೃಷ್ಟಿಯಲ್ಲಿ ಅಣುರೂಪದ ಜೀವತಂತುವಿಗೆ ಕೂಡ ಅದರದೇ ಆದ ಮಹತ್ವವಿದೆ, ಸ್ಥಾನವಿದೆ, ಕಾರ್ಯವಿದೆ, ನಿಸರ್ಗದಲ್ಲಿ ಪ್ರಾಣಿ-ಪಕ್ಷಿ-ಸಸ್ಯ ಸಂಕುಲ, ಮನುಷ್ಯ, ಜೀವಜಂತು ಒಂದನ್ನೊಂದೂ ಬಿಟ್ಟು ಯಾವುದೂ ಇರಲು ಸಾಧ್ಯವಿಲ್ಲ. ಆದುದರಿಂದಲೇ ಪ್ರತಿಯೊಂದು ಸೃಷ್ಟಿಯೂ ಪೂಜನೀಯ. ಈ ಮನೋಭಾವನೆಯನ್ನು ನಾವು ಪುರಾಣಗಳಲ್ಲಿಯೂ, ಶಿಲ್ಪ ಶಾಸ್ತ್ರದಲ್ಲಿಯೂ, ಜನಪದ ಸಾಹಿತ್ಯದಲ್ಲಿಯೂ ನೋಡಬಹುದು. ಕಲ್ಯಾಣಿ ಚಾಲುಕ್ಯರು ಹಾಗೂ ಹೊಯ್ಸಳರ ಶಿಲ್ಪಗಳಲ್ಲಿ ಮಾನವರ, ದೇವತೆಗಳ ಮೂರ್ತಿಗಳೊಂದಿಗೆ ಗಿಡ, ಮರ, ಬಳ್ಳಿಗಳ, ಹಾವು-ಚೇಳು, ಹಲ್ಲಿ ಇತ್ಯಾದಿ ಜೀವ ಜಂತುಗಳ ಕೆತ್ತನೆಗಳನ್ನೂ ನಾವು ನೋಡಬಹುದು.

ಶಂಖವೆಂದೊಡನೆಯೇ ಅದರ ಚೆಲುವು ಮತ್ತು ಶುದ್ಧತೆ ಮನಸ್ಸಿಗೆ

ಬರುತ್ತದೆ. ಆದುದರಿಂದಲೇ ಅದು ಪೂಜೋಪಕರಣಗಳಲ್ಲಿ ಒಂದಾಗಿದೆ. ಇದರ ನಾದವಂತೂ ಮನಮೋಹಕ. ಹಾಗೆ ನೋಡಿದರೆ ಶಂಖ ಉಳಿದೆಲ್ಲ ಲೋಹಗಳಿಗಿಂತ ದೀರ್ಘಕಾಲ ಬಾಳುವಂತಹದು, ಸಿಂಧು, ಸರಸ್ವತಿ ನದಿ ತೀರದ ಸಂಸ್ಕೃತಿಯಲ್ಲಿ ಐದು ಸಾವಿರ ವರ್ಷಗಳ ಹಿಂದೆಯೇ ಶಂಖದ ಬಳೆ, ಉಂಗುರ, ಚಮಚ, ಪಗಡೆದಾಳಗಳು, ತೂಕದ ಬಟ್ಟುಗಳು, ಆಟದ ಸಾಮಾನುಗಳು, ಇವುಗಳು ಉಪಯೋಗಿಸಲ್ಪಡುತ್ತಿದ್ದವೆಂಬುದಕ್ಕೆ ಆಧಾರಗಳಿವೆ. ಉಳಿದ ಲೋಹಗಳಂತೆ ದ್ರಾವಕ (Acid) ಗಳ ಪ್ರಭಾವ ಶಂಖದ ಮೇಲಾಗುವುದಿಲ್ಲ ಎನ್ನುವುದು ಗಮನಾರ್ಹ. ಆಯುರ್ವೇದದಲ್ಲೂ ಶಂಖದ ಉಪಯೋಗ ಯಥೇಚ್ಛವಾಗಿದೆ. ಶಂಖಗಳಲ್ಲಿ ಉತ್ತಮ ಜಾತಿಯ ಪವಿತ್ರ ಶಂಖಗಳು ದ್ವಾರಕೆ ಮತ್ತು ರಾಮೇಶ್ವರದ ಸಮುದ್ರದ ಬಳಿ ದೊರಕುತ್ತವೆ. ಶ್ರೀ ಕೃಷ್ಣನು ಶಂಖಾಸುರನನ್ನು ಕೊಂದು ಪಾಂಚಜನ್ಯವನ್ನು ತಂದನೆಂಬ ಪ್ರತೀತಿ ಇದೆ.

ಮಾನವನ ಆರೋಗ್ಯರಕ್ಷಣೆಯಲ್ಲಿ ತುಳಸಿಯ ಪಾತ್ರ ಹಿರಿದು, ಆಯುರ್ವೇದದಲ್ಲಿ ಇಂದಿಗೂ ತುಳಸಿಯನ್ನು ಹೇರಳವಾಗಿ ಉಪಯೋಗಿಸುತ್ತಾರೆ. ಪರಿಸರ ಶುದ್ಧೀಕರಣದಲ್ಲಿಯೂ ತುಳಸಿಗೆ ತನ್ನದೇ, ಆದ ಸ್ಥಾನವಿದೆ. ಆದ್ದರಿಂದಲೇ ಮನೆ ಮನೆಗಳ ಮುಂದೆಯೂ ತುಳಸಿ ಪ್ರಮುಖಳಾಗಿ, ವೃಂದಾವನದಲ್ಲಿ ಕುಳಿತಿದ್ದಾಳೆ. ಅದರ ಎಲೆ, ಬೀಜ, ಕೊನೆಗೆ ಕಾಷ್ಠಕೂಡ ದಿನನಿತ್ಯದ ಜೀವನದಲ್ಲಿ ಬಳಸಲ್ಪಡುತ್ತದೆ. ಇದಲ್ಲದೇ ತುಳಸಿಗೆ ಪೌರಾಣಿಕ ಹಿನ್ನೆಲೆಯೂ ಇದೆ. ತುಳಸಿ ಕೃಷ್ಣನ ಪತ್ನಿ. ಲಕ್ಷ್ಮಿಯ ಸ್ಥಾನ, ಹೀಗೂ ತುಳಸಿಗೆ ಮನ್ನಣೆಯಿದೆ. ವರ್ಷಕ್ಕೊಮ್ಮೆ ಬರುವ ತುಳಸಿಯಲಗ್ನ ಭಾರತದಾದ್ಯಂತ ಅದರಲ್ಲೂ ಗೋವೆಯಲ್ಲಿ ವಿಶೇಷ ಉತ್ಸಾಹದಿಂದ, ವಿಜೃಂಭಣೆಯಿಂದ ಆಚರಿಸಲ್ಪಡುತ್ತದೆ. ಹೀಗೆ ತುಳಸಿ ನಮ್ಮ ಜೀವನದಲ್ಲಿ ಹಾಸುಹೊಕ್ಕಾಗಿದ್ದಾಳೆ.

ತುಳಸಿ, ಶಂಖ, ಸಾಲಿಗ್ರಾಮಗಳ ಪೂಜೆ ಕೇವಲ ಮೂಢನಂಬಿಕೆಯದಲ್ಲ. ಸೃಷ್ಟಿ, ನಿಸರ್ಗ ಇವುಗಳ ಚಕ್ರದಲ್ಲಿ ನಂಬಿಕೆಯಿರುವವರಿಗೆಲ್ಲ ಅವು ಪೂಜನೀಯ

ಎಂದು ಆದ್ಯರಾಮಾಚಾರ್ಯರು ಪುರಾಣಗಳ ಆಧಾರದಿಂದ ಮಾತ್ರವಲ್ಲ, ಉತ್ತರ ಭಾರತದಾದ್ಯಂತ ಸಂಚರಿಸಿ, ಸಂಶೋಧಿಸಿ, ಅನೇಕ ಗ್ರಂಥಗಳನ್ನು ಪರಿಶೀಲಿಸಿ ನಿರೂಪಿಸಿದ್ದಾರೆ. ಅನೇಕ ಹೊಸ ವಿಚಾರಗಳನ್ನು ಮಂಡಿಸಿದ್ದಾರೆ. ಆದುದರಿಂದಲೇ ಪ್ರತಿಯೊಬ್ಬ ಭಾರತೀಯನು "ಶುಭಂ ಭವತು" ಈ ಗ್ರಂಥವನ್ನು ಓದಬೇಕೆಂದು ಆಶಿಸುತ್ತೇನೆ.

23.8.1996

ಶ್ರಾವಣ ಶುಕ್ಲಪಕ್ಷ

ಶುಕ್ರವಾರ, ವರಮಹಾಲಕ್ಷ್ಮಿವ್ರತ


ಶಿಕಾರಿಪುರ ರಂಗನಾಥರಾವ್

( ಎಸ್.ಆರ್. ರಾವ್ )

ಭಾರತೀಯ ಪುರಾತತ್ವಸರ್ವೇಕ್ಷಣಾಲಯ

ನಿವೃತ್ತ ಅಧೀಕ್ಷಿತರು

(ಸೂಪರಿಂಟೆಂಡೆಂಟರು) ಹಾಗೂ ನಿವೃತ್ತ

ಗವರ್ನಮೆಂಟ್ ಆಫ್ ಇಂಡಿಯ ಮರೀನ

ಆರ್ಕಿವಿಯ ಅಡ್ವೈಜರರು, ಗೋವಾ


**ಉಚ್ಚೈ: ಶ್ರವಸಮಸ್ಮಾನಾಂ ಭಿದ್ಧಿ ಮಾಮಮೃತೋದ್ಭವಮ್**

**ಐರಾವತಂ ಗಜೇನ್ದ್ರಾಣಾಂ ನಾರಾಣಾಂ ಚ ನರಾಧಿಪಂ**

ಸಮುದ್ರ ಮಂಥನದಲ್ಲಿ ಉತ್ಪತ್ತಿಯಾದ ಅಶ್ವಗಳಲ್ಲಿ ನಾನು ಉಚ್ಚೈಶ್ರವ ಗಜೇಂದ್ರಗಳಲ್ಲಿನಾನು ಐರಾವತ ಮಾನವರಲ್ಲಿ ನಾನು ರಾಜನೆನೆಸುವೆ

# ಪರಿಚಯ ನುಡಿ

ಶ್ರೀ ಎಸ್. ಆರ್. ರಾವ್. ಇವರು ತಮ್ಮ ಸೇವಾವಧಿಯಲ್ಲಿ ಅನೇಕ ಸ್ಮರಣೀಯ ಕಾರ್ಯಗಳನ್ನು ಮಾಡಿದ್ದಾರೆ. ಭಗವಾನ್ ಶ್ರೀ ಕೃಷ್ಣನಿಂದ ನಿರ್ಮಿತವಾಗಿದ್ದ ಆತನ ದ್ವಾರಕಾನಗರವು ಆತನ ಕಾಲದಲ್ಲಿಯೇ ಸಮುದ್ರದಲ್ಲಿ ಮುಳುಗಿ ಹೋಯಿತು. ರಾವ್ ಅವರು ಬಹುಪರಿಶ್ರಮದಿಂದ ಅದನ್ನು ಶೋಧಿಸಿ ವಿಶ್ವಕ್ಕೆ ತೋರಿಸಿಕೊಟ್ಟರು. ಅದೇ ರೀತಿ ಶ್ರೀ ಕೃಷ್ಣನ ಜನ್ಮಸ್ಥಾನವೂ ಸಹ ಅನ್ಯರ ವಶವಾಗಿದ್ದುದನ್ನು ಬಿಡಿಸಿಕೊಂಡರು. ಅತ್ಯಂತ ಪ್ರಾಚೀನ ಕ್ಷೇತ್ರವೆನಿಸಿದ ಸಿದ್ಧಪುರ ಅಥವಾ ಮಾತೃಗಯಾದಲ್ಲಿದ್ದ ದೇವಮಂದಿರವನ್ನು ಬೇರೊಬ್ಬರು ಆಕ್ರಮಣಮಾಡಿಕೊಂಡು ತಮ್ಮ ಪ್ರಾರ್ಥನಾ ಮಂದಿರವನ್ನಾಗಿ ಮಾಡಿಕೊಂಡಾಗ ಆ ಸ್ಥಳವು ಪುರಾತನ ಹಿಂದೂ ದೇವಾಲಯವೆಂಬುದನ್ನು ತೋರಿಸಿಕೊಟ್ಟವರ, ಶ್ರೀ ಕೃಷ್ಣನ ಕಾಲದಲ್ಲಿದ್ದ ಲೋಥಲ್ ಎಂಬ ಹಡಗುಕಟ್ಟೆಯನ್ನು ಗುರುತಿಸಿದರು. ದ್ವಾರಕಾನಾಥನ ದೇವಮಂದಿರದ ಜೀರ್ಣೋದ್ಧಾರ ವನ್ನಾರಂಭಿಸಿದವರೂ ಶ್ರೀ ರಾಯರೇ.

ಶ್ರೀಯುತರು ಕರ್ನಾಟಕ ವರ್ತುಲದ ಪುರಾತತ್ವ ಸಂರಕ್ಷಣಾಲಯದ ಅಧಿಕಾರದಲ್ಲಿದ್ದಾಗ ಹಂಪಿ, ಬಾದಾಮಿ, ಐಹೊಳೆ, ಪಟ್ಟದಕಲ್ಲು ಮೊದಲಾದ ಸ್ಥಳಗಳನ್ನೆಲ್ಲ ದೇಶ ವಿದೇಶದ ಪ್ರವಾಸಿಗರ ಮನಸೆಳೆಯುವಂತೆ ಆ ದೇವಾಲಯಗಳನ್ನೆಲ್ಲ ಮೊದಲಿನಂತೆ ಮಾಡಿ ಪರಿಸರದಲ್ಲೆಲ್ಲ ರಮಣೀಯ ಹೂ ತೋಟಗಳನ್ನು ನಿರ್ಮಿಸಿದರು.

ಸಂಸ್ಕೃತಕ್ಕಿಂತಲೂ ಪೂರ್ವದಲ್ಲಿದ್ದ ಲಿಪಿಯನ್ನು ಕುರಿತು ಸಂಶೋಧನೆ ನಡೆಸಿದವರು. ವಿಶ್ವದ ಅನೇಕ ವಿದ್ಯಾಪೀಠಗಳಲ್ಲಿ ರಾಯರ ಉಪನ್ಯಾಸಗಳಾಗಿರುವವು. ಅವರಿಂದ ರಚಿತವಾದ ಗ್ರಂಥಗಳು ವಿಶ್ವದ ಸಂಶೋಧಕರಿಂದ ಮಾನ್ಯತೆಯನ್ನು ಹೊಂದಿರುವದುಂಟು.

ಕನ್ನಡನಾಡಿನ ವರಪುತ್ರರೆನಿಸಿದ ಶಿಕಾರಿಪುರದ ರಂಗನಾಥರಾಯರು ''ಶುಭಂಭವತು'' ಗ್ರಂಥಕ್ಕೆ ಮುನ್ನುಡಿಯನ್ನಿತ್ತಿರುವದು ಲೇಖಕನ ಮಹಾ ಭಾಗ್ಯವೆನಿಸುವದು. ಆದುದರಿಂದ ಶ್ರೀಯುತರನ್ನು ಹೃತ್ಪೂರ್ವಕ ವಂದಸುವೆನು.

ಆದ್ಯರಾಮಾಚಾರ್ಯ

ಅನನ್ಯಾಶ್ಚಿನ್ತಯನ್ತೋ ಮಾಂ
ಯೇ ಜನಾಃ ಪರ್ಯುಪಾಸತೇ?

ತೇಷಾಂ ನಿತ್ಯಾಭಿಯುಕ್ತಾನಾಂ
ಯೋಗಕ್ಷೇಮಂ ವಹಾಮ್ಯಹವತ್ ॥

ನನ್ನ ದಿವ್ಯವಾದ ರೂಪವನ್ನು ಧ್ಯಾನಿಸುತ್ತ ಅನನ್ಯಭಕ್ತಿಯಿಂದ ಯಾರು ನನ್ನನ್ನು ಆರಾಧಿಸುವರೋ ಅವರ ಯೋಗಕ್ಷೇಮವನ್ನು ನಾನು ನೋಡಿಕೊಳ್ಳುವೆನು. ಅವರಲ್ಲಿರುವದನ್ನು ರಕ್ಷಿಸುವೆನು.

# ಲೇಖಕನ ಮಾತು

ಭಾರತೀಯ ಸನಾತನ ಸಂಪ್ರದಾಯವಾದಿಗಳು ತಾವು ಪ್ರತಿನಿತ್ಯ ಆಚರಿಸುತ್ತಿರುವ ಪೂಜಾವಿಧಾನದಲ್ಲಿ ತಿಳಿದೋ ತಿಳಿಯದೆಯೋ ಸಂಭವಿಸಬಹುದಾದ ಲೋಪದೋಷಗಳ ನಿವಾರಣಾರ್ಥವಾಗಿ ಸಾಲಿಗ್ರಾಮಗಳ ಪೂಜೆ ಮಾಡುವ ಸಂಪ್ರದಾಯವನ್ನು ಕಡ್ಡಾಯವಾಗಿ ಬಹುಕಾಲದಿಂದಲೂ ಆಚರಿಸುತ್ತ ಬಂದಿದ್ದಾರೆ. ತುಳಸಿ ಹಾಗೂ ಸಾಲಿಗ್ರಾಮಗಳ ಪೂಜೆ ಸಕಲ ಪಾಪಗಳನ್ನು ಪರಿಹರಿಸಬಲ್ಲುದು ಎಂಬ ನಂಬಿಕೆಯೇ ಇದಕ್ಕೆ ಮೂಲ ಕಾರಣ.

ನಿಸರ್ಗ ದೇವತೆಯ ಅನೇಕ ಚಮತ್ಕಾರಗಳಲ್ಲಿ ಸಾಲಿಗ್ರಾಮಗಳ ಸೃಷ್ಟಿಯೂ ಒಂದು. ಇವುಗಳ ಉತ್ಪತ್ತಿಯು ನಿಸರ್ಗದ ತವರೂರೆನಿಸಿದ ನೇಪಾಳದಲ್ಲಿ ಮಂಜುಳವಾಗಿ ಹರಿಯುವ "ಗಂಡಕಿ" ಎಂಬ ನದಿಯಲ್ಲಿ. ಆ ಪ್ರವಾಹದಲ್ಲಿಯೂ ಸಹ ಕೆಲವು ಸ್ಥಳಗಳಲ್ಲಿ, ಆಳವಾದ ಕೆಸರಿನಲ್ಲಿ ನಾನಾ ಪ್ರಕಾರಗಳಿಂದ, ನಾನಾ ವರ್ಣಗಳಿಂದ ಕೂಡಿದ ವಿವಿಧ ಚಕ್ರಾಂಕಿತಗಳಿಂದ ಕಣ್ಮನ ತಣಿಸುವ ಶಿಲೆಗಳನ್ನು ಹಾಗೂ ಶಿಲಾಮೂರ್ತಿಗಳನ್ನು ಅಲ್ಲಿಯ ಜನರು ಹುಡುಕಿ ತೆಗೆಯುತ್ತಾರೆ. ಅದನ್ನು ನೋಡುವುದೇ ಕಣ್ಣಿಗೊಂದು ಹಬ್ಬವೆನಿಸುತ್ತದೆ.

***1. ಸಾಲಿಗ್ರಾಮಗಳ ರೂಪಗಳು :***

ಈ ಸಾಲಿಗ್ರಾಮಗಳಲ್ಲಿ (ಕೆಲವರು ಇವುಗಳನ್ನು ಸಾಲಗ್ರಾಮ ಎಂದು

ಸಂಬೋಧಿಸಿದ್ದಾರೆ) ನಾನಾ ಬಗೆಯಾದ ವರ್ಣಭೇದಗಳಿವೆ. ಆಕಾರಗಳಲ್ಲಿಯೂ ವಿಭಿನ್ನತೆಗಳಿವೆ. ಕಾಣುವ ಚಕ್ರಾಂಕಿತಗಳಲ್ಲಿ ಅನೇಕ ತರಹದ ವೈವಿಧ್ಯತೆಗಳಿವೆ. ಈ ನಿಮಿತ್ತವಾಗಿಯೇ ಅವುಗಳಲ್ಲಿ ಭಗವದ್ರೂಪವನ್ನು ಗುರುತಿಸಲಾಗುತ್ತದೆ. ಸಾಲಿಗ್ರಾಮಗಳಲ್ಲಿರುವ ಆ ಭಗವದ್ರೂಪಗಳನ್ನು ಕಂಡುಕೊಳ್ಳಲು ಪುರಾಣಗಳಲ್ಲಿ ಅಲ್ಲಲ್ಲಿ ಸೂಚ್ಯವಾದ ವಿವರಗಳು ಲಭ್ಯವಾಗಿವೆ. ಸಾಮಾನ್ಯವಾಗಿ ಶ್ಯಾಮವರ್ಣ, ಕೃಷ್ಣವರ್ಣ, ಶ್ವೇತವರ್ಣ, ಬಹುವರ್ಣ, ಕಪಿಲವರ್ಣ ಎಂದು ಐದು ವಿಧವಾದ ವರ್ಣಗಳನ್ನು ಪ್ರಾಚೀನರು ಉದ್ಧರಿಸಿದ್ದಾರೆ.

ಈ ಶಿಲೆಯಲ್ಲಿ ಅಡಕವಾದ ಮೂರ್ತಿಲಕ್ಷಣಗಳೊಂದಿಗೆ ಚಕ್ರಗಳ ಲಕ್ಷಣಗಳ ವಿವರಗಳನ್ನು ಸಹ ಪೂರ್ವಜರು ನಮಗೆ ತಿಳಿಸಿಕೊಟ್ಟಿದ್ದಾರೆ. ಅವುಗಳಲ್ಲಿ ಕೆಲವು ಸಾಲಿಗ್ರಾಮಗಳ ಹೆಸರುಗಳನ್ನು ಮಾತ್ರ ಇಲ್ಲಿ ಸಂಗ್ರಹಿಸಿ ಕೊಡಲಾಗಿದೆ.

ಶ್ರೀಮೂರ್ತಿ ಲಕ್ಷಣ, ಮತ್ಸ್ಯ, ದಶಭೇದರೂಪ, ಅಂದರೆ ಮತ್ಸ್ಯ, ಕೂರ್ಮ, ವರಾಹ, ಅದರಲ್ಲಿಯೂ ಲಕ್ಷ್ಮೀ ವರಾಹ, ಭೂ ವರಾಹ, ನೃವರಾಹ, ಲಕ್ಷ್ಮೀನರಸಿಂಹ ವರಾಹ, ವಿದಾರಣ ವರಾಹ ಎಂಬ ಪ್ರಬೇಧಗಳಿವೆ. ಅದೇ ರೀತಿ ಪಾತಾಳ ನರಸಿಂಹ, ಕುಕ್ಷಿ ನರಸಿಂಹ, ಯೋಗಾನರಸಿಂಹ, ವೀರನರಸಿಂಹ, ಕಪಿಲನರಸಿಂಹ ಎಂಬ ವಿವಿಧ ನರಸಿಂಹ ರೂಪಗಳನ್ನು ತಿಳಿಸಿಕೊಟ್ಟಿದ್ದಾರೆ. ಇನ್ನು ವಾಮನರೂಪದಲ್ಲಿ ದಧಿ ವಾಮನ, ಹೃಸ್ವೋನ್ನತ ವಾಮನ, ವೈಶಾಖ್ಯ ವಾಮನ ರೂಪಗಳಿವೆ. ಜಾಮದಗ್ನಿ, ಬಲರಾಮ, ಅದೇ ರೀತಿ ಬಾಲರಾಮ, ಕೋದಂಡರಾಮ, ಸೀತಾರಾಮ, ಶ್ರೀರಾಮ, ಪಟ್ಟಾಭಿರಾಮ, ಷಟ್‌ಚಕ್ರ ಸೀತಾರಾಮ, ತ್ರಿಮೂರ್ತಿ ರಾಮವೆಂಬ ರಾಮ ತಾರಕ ಸಾಲಿಗ್ರಾಮಗಳ ವರ್ಣನೆ, ಮಾಡಿದ್ದಾರೆ. ಅದೇ ರೀತಿ ತಾರಕ ಬ್ರಹ್ಮ, ಪ್ರಲಂಭಘ್ನ, ಸಂಕರ್ಷಣ, ಕೃಷ್ಣ, ಶ್ರೀವತ್ಸಕೃಷ್ಣ, ಬಾಲ ಗೋಪಾಲ, ಮದನ ಗೋಪಾಲ, ಸಂತಾನ ಗೋಪಾಲ, ಕಾಳೀಯ ಮರ್ದನ, ವಿಜಯ ಸಾರಥಿ, ಶ್ಯಮಂತಕ ಹರಿ, ಚಾಣೂರಮರ್ದನ, ವೇಣುಗೋಪಾಲ

ಕೃಷ್ಣ, ನಿರ್ವಾಣಪದ ಗೋಪಾಲ ಕೃಷ್ಣ ಎಂಬ ಹೆಸರಿನಲ್ಲಿ ಸಾಲಿಗ್ರಾಮಗಳಿರುವುದನ್ನು ತಿಳಿಸಿ ಹೇಳಿದ್ದಾರೆ. ಅನಂತರ ಕಲ್ಕಿ, ಬುದ್ಧ, ಕೇಶವ, ಶ್ಯಾಮನಾರಾಯಣ, ಲಕ್ಷ್ಮೀನಾರಾಯಣ, ಮಾಧವ, ಗೋವಿಂದ, ಮಹಾವಿಷ್ಣು, ಮಧುಸೂದನ, ತ್ರಿವಿಕ್ರಮ, ಶ್ರೀಧರ, ಹೃಷೀಕೇಶ, ಪದ್ಮನಾಭ, ದಾಮೋದರ, ವಾಮದೇವ, ವಾಸುದೇವ, ಅನಿರುದ್ಧ, ಪುರುಷೋತ್ತಮ, ಜನಾರ್ಧನ, ಉಪೇಂದ್ರ, ಹಯಗ್ರೀವ, ದತ್ತಾತ್ರೇಯ, ಶಿಂಶುಮಾರ, ಷಣ್ಮುಖ, ಹಂಸ, ಪರಮಹಂಸ, ಪುಂಡರೀಕಾಕ್ಷ, ಲಕ್ಷ್ಮೀಪತಿ, ವಟಪತ್ರಶಾಯಿ, ನಾಭಿಕಮಲ ವಿಷ್ಣು, ಚಕ್ರಪಾಣಿ, ಸುದರ್ಶನ, ಹರಿಹರ, ಶಂಕರನಾರಾಯಣ, ಸ್ವರ್ಣಗರ್ಭ, ಗೌರೀನಾಭ, ಶಿವನಾಭಿ, ಈಶಾನ, ಸೂರ್ಯ, ಕಾಮಧೇನು, ಹೀಗೆ ಒಂದಲ್ಲ ಎರಡಲ್ಲ ನೂರಾರು ಬಗೆ ಸಾಲಿಗ್ರಾಮಗಳ ಲಕ್ಷಣಗಳನ್ನು ಕುರಿತು ಪುರಾಣ ಗ್ರಂಥಗಳಲ್ಲಿ ಉಪಲಬ್ಧವಾದ ವಿವರಗಳನ್ನು ಕುರಿತು ಅಭ್ಯಾಸ ಮಾಡಿದಂತೆಲ್ಲ ಜಗತ್ ಸೃಷ್ಟಿಕರ್ತನ ಲೀಲಾವಿಲಾಸಗಳ ಪರಿಚಯವು ನಮಗಾಗುತ್ತದೆ. ಅಲ್ಲದೇ ಬ್ರಹ್ಮಚಾರಿಗಳು ಪೂಜಿಸಬಹುದಾದ ಸಾಲಿಗ್ರಾಮಗಳಾವವು? ಸನ್ಯಾಸಿಗಳಿಂದ ಪೂಜಿಸಲ್ಪಡುವ ಸಾಲಿಗ್ರಾಮಗಳ ಲಕ್ಷಣಗಳೇನು? ಸಂಸಾರಿಗಳು ಎಂಥ ಸಾಲಿಗ್ರಾಮಗಳನ್ನು ಹೇಗೆ ಪೂಜಿಸಿದರೆ ಆ ಗೃಹಸ್ಥನಿಗೆ ಕಲ್ಯಾಣವಾಗುವದು; ಎಂಬೆಲ್ಲ ವಿವರಗಳನ್ನೂ ಹಿರಿಯರು ನಮಗೆ ಒದಗಿಸಿಕೊಟ್ಟಿದ್ದಾರೆ. ಈ ಸಾಲಿಗ್ರಾಮಗಳ ಪೂಜೆಗೆ ತುಳಸೀ ದಳಗಳು ಬಹು ಅವಶ್ಯಕ. ಆದುದರಿಂದ ಇಲ್ಲಿ ತಿಳಿದಷ್ಟು ಮಟ್ಟಿಗೆ ತುಳಸಿಯ ಮಹತಿಯನ್ನೊದಗಿಸಲಾಗಿದೆ.

### *2. ತುಳಸೀ ಪ್ರಭೇದ :*

ನಮ್ಮ ನಾಡಿನ ಹರಿದಾಸರು ತಮ್ಮ ಒಂದು ಪದ್ಯದಲ್ಲಿ "ಒಂದು ದಲ ಶ್ರೀ ತುಳಸಿ ಬಿಂದು ಗಂಗೋದಕವು ಇಂದಿರಾರಮಣನಿಗರ್ಪಿತವೆನ್ನಲು" ಎಂಬ ಪದವನ್ನೇ ರಚನೆ ಮಾಡಿದ್ದಾರೆ. ಈ ತುಲಸೀ ವೃಕ್ಷದಲ್ಲಿಯೂ ಅನೇಕ ಪ್ರಭೇದಗಳಿವೆ. ಆಯಾ ಪರಿಸರಕ್ಕೆ ತಕ್ಕಂತೆ ಆ ವೃಕ್ಷಗಳ ಬೆಳವಣಿಗೆಗಳಿವೆ. ಮುಖ್ಯವಾಗಿ ರಾಮತುಳಸಿ ಹಾಗೂ ಕೃಷ್ಣ ತುಳಸಿ ಎಂಬ ಎರಡು ಮುಖ್ಯ

ಪ್ರಭೇದಗಳೆಂದು ಗುರುತಿಸಲಾಗಿದೆ. ಪೂಜೆಗಾಗಿ ಈ ವೃಕ್ಷಗಳಿಂದ ತುಳಸೀ ದಳಗಳನ್ನು ಯಾವಾಗ ಮತ್ತು ಹೇಗೆ ಯಾವ ಕಾಲದಲ್ಲಿ ಬಿಡಿಸಿಕೊಂಡರೆ ವಿಹಿತ ಎಂಬ ಮಾತನ್ನೂ ಸಹ ತಿಳಿಸಿಕೊಡಲಾಗಿದೆ.

### *3. ಸಮುದ್ರೋತ್ಪತ್ತಿ ಶಂಖ :*

ಸಾಗರ ಗರ್ಭದಿಂದ ನಾನಾ ಬಗೆಯ ಮೋಹಕ ರೂಪಗಳಿಂದ ಕೂಡಿದ ಶಂಖಗಳು ಹೊರಬರುತ್ತವೆ. ಈ ಶಂಖಗಳಿಂದಲೇ ಸಾಲಿಗ್ರಾಮಕ್ಕೆ ಅಭಿಷೇಕ ಮಾಡುವ ಸಂಪ್ರದಾಯವು ತಂತ್ರಸಾರಾಗಮದಲ್ಲಿ ಹೇಳಲಾಗಿದೆ. ಇನ್ನುಳಿದ ಆಗಮದವರು ಶಂಖದ ವಿನಃ ಶುದ್ಧ ಜಲದಿಂದಲೇ ಸಾಲಿಗ್ರಾಮಕ್ಕೆ ಅಭಿಷೇಕ ಮಾಡುತ್ತಾರೆ. ಈ ಶಂಖಗಳಲ್ಲಿಯೂ ನಾನಾ ರೂಪಗಳಿವೆ. ಅವುಗಳಲ್ಲಿ ಪ್ರಮುಖವಾದವುಗಳೆಂದರೆ ಬಲಮುರಿ ಹಾಗೂ ಎಡಮುರಿ ಶಂಖಗಳು. ಈ ಶಂಖಗಳ ರೂಪಲಕ್ಷಣಗಳನ್ನೂ ಸಹ ಪೂರ್ವಜರು ತಿಳಿಸಿಕೊಟ್ಟಿದ್ದಾರೆ. ಆಶ್ಚರ್ಯದ ಮಾತೆಂದರೆ ಈ ಶಂಖಗಳಲ್ಲಿ ಗಂಡು ಹೆಣ್ಣುಗಳೆಂಬ ಬೇಧಗಳಿರುವದು. ಎಂಥ ಶಂಖಗಳನ್ನು ನಾವು ಮನೆಯಲ್ಲಿಟ್ಟುಕೊಳ್ಳಬೇಕು, ಯಾವ ಶಂಖಗಳಿಂದ ಸಾಲಿಗ್ರಾಮಗಳಿಗೆ ಅಭಿಷೇಕ ಮಾಡಿದರೆ ನಮಗೆ ಕ್ಷೇಮವಾಗುವುದು, ಎಂಬೆಲ್ಲ ಮಾತನ್ನೂ ಸಹ ಇಲ್ಲಿ ವಿವರವಾಗಿ ಕೊಡಲಾಗಿದೆ.

### *4. ಓಂಕಾರ ಮಹಿಮಾ :*

ಸರ್ವಶಬ್ದಗಳಿಗೂ ನಾದಕ್ಕೂ ಓಂಕಾರವೇ ಮೂಲ. ಅದು ಪ್ರಣವ ಮಂತ್ರವೆನಿಸುವುದು. ಪೂಜಾ ಪ್ರಾರಂಭ ಕಾಲದಲ್ಲಿ ಓಂಕಾರವೇ ಮೂಲ. ಆದುದರಿಂದ ಇಲ್ಲಿ ಓಂಕಾರದ ಮಹತ್ವವನ್ನು ತಿಳಿಸಲು ಪ್ರಯತ್ನಿಸಲಾಗಿದೆ. ಸನಾತನ ಸಂಪ್ರದಾಯವಾದಿಗಳಿಗೆ ಪ್ರತಿನಿತ್ಯ ಸಾಧನೆಗೆ ಅನುಕೂಲವಾಗುವಂತೆ ಸಾಲಿಗ್ರಾಮ, ತುಳಸಿ, ಶಂಖ ಹಾಗೂ ಓಂಕಾರ ಪ್ರಣವ ಮಂತ್ರ ಇವುಗಳನ್ನೆಲ್ಲ ಒಂದೇ ಗ್ರಂಥದಲ್ಲಿ ಅಳವಡಿಸಿ ವಾಚಕರ ಕೈಲಿಡಲು ಪ್ರಯತ್ನಿಸಲಾಗಿದೆ.

ಈ ಕೃತಿಯು ಹೊರಬರಲು ಮೂಲಕಾರಣರಾದವರೆಂದರೆ ನನ್ನ

ಆತ್ಮೀಯ ಮಿತ್ರರಾಗಿದ್ದ ದಿ : ಜಯತೀರ್ಥ ರಾಜಪುರೋಹಿತರು (ಐ.ಎ.ಎಸ್.) ಹಾಗೂ ದಿ : ಶ್ರೀ ವಿ.ಕೆ. ಗೋಕಾಕರು. ಇವರು ಕೇಂದ್ರ ಸಾಹಿತ್ಯ ಅಕಾಡಮಿಯ ಅಧ್ಯಕ್ಷ ಸ್ಥಾನದಲ್ಲಿದ್ದಾಗ ಶ್ರೀ ರಾಜಪುರೋಹಿತರು ಆ ಸಂಸ್ಥೆಯ ಸದಸ್ಯರಾಗಿದ್ದರು. ಕೇಂದ್ರ ಸಾಹಿತ್ಯ ಅಕಾಡಮಿಯವರು ಪ್ರವಾಸಕ್ಕೆ ಅನುದಾನವನ್ನೀಯುವ ಯೋಜನೆಯಡಿಯಲ್ಲಿ ಕರ್ನಾಟಕ ರಾಜ್ಯದಿಂದ ನನಗೆ ಅನುದಾನವನ್ನು ದೊರಕಿಸಿಕೊಟ್ಟರು. ಆ ಮಹನೀಯರಿಬ್ಬರನ್ನೂ ನಾನು ಈ ಸಂದರ್ಭದಲ್ಲಿ ಮನಸಾ ಸ್ಮರಿಸಿಕೊಳ್ಳುತ್ತೇನೆ. ಆ ಅನುದಾನದ ನಿಮಿತ್ತವಾಗಿ ದರ್ಭಾಂಗಾ, ಮಿಥಿಲಾ, ನವದ್ವೀಪ ಮೊದಲಾದ ಭಾಗಗಳಲ್ಲಿ ಸಂಚರಿಸುವಾಗ ಈ ಲೇಖಕನ ಪೂರ್ವಜನ್ಮ ಸುಕೃತವೆಂಬಂತೆ ಶ್ರೀ ಹರಿಚರಣಶರ್ಮರವರ ಗ್ರಂಥಭಂಡಾರದಲ್ಲಿ ಸಾಲಿಗ್ರಾಮಗಳ ಮಾಹಿತಿಯು ಲಭಿಸಿತು. ತುಳಸಿಯ ವಿಚಾರವಾಗಿ ಗೋರಖಪುರದವರಿಂದ ಮುದ್ರಿತವಾದ ಲೇಖನವು ಲಭಿಸಿತು. ಪ್ರಸಿದ್ಧ ಹಿಂದೀ (ಧರ್ಮಯುಗ) ಪತ್ರಿಕೆಯಲ್ಲಿ ಶಂಖಗಳನ್ನು ಕುರಿತಾದ ಲೇಖನವನ್ನು ಓದಿದೆ. ಓಂಕಾರವನ್ನು ಕುರಿತು ನನ್ನ ಪೂಜ್ಯ ತೀರ್ಥರೂಪರಾದ ದಿ : ಪಂ. ಆದ್ಯ ಸೇತುರಾಮಾಚಾರ್ಯರಿಂದ ವಿವರಗಳನ್ನು ಸಂಗ್ರಹಿಸಿದೆ. ಹೀಗೆ ನಾನಾ ರೂಪದಲ್ಲಿ ಸಂಗ್ರಹವಾದ ವಿಷಯಗಳನ್ನೆಲ್ಲ ಒಟ್ಟುಗೂಡಿಸಿ ದುಂಬಿಯೋಪಾದಿಯಲ್ಲಿ ಈ ಮಧು ಪಾತ್ರೆಯನ್ನು ವಾಚಕರ ಕೈಗಿಡುವ ಸಾಹಸವನ್ನು ಮಾಡಿದ್ದೇನೆ. ನನ್ನ ಈ ಕಾರ್ಯದಲ್ಲಿ ಆತ್ಮೀಯ ಹಿರಿಯರಾದ ಪೂಜ್ಯ ಶ್ರೀ ರಂಗಸ್ವಾಮಿ ಭಟ್ಟಾಚಾರ್ಯರು, ಸನ್ಮಿತ್ರರಾದ ಶ್ರೀ ಕಣ್ಣ ಭಟ್ಟಾಚಾರ್ಯ, ಶ್ರೀ ಶೇಷಾದ್ರಿ ಭಟ್ಟರು, ವಿಷ್ಣನ್ ಟ್ರಾವಲ್ಸ್ ಏಜನ್ಸಿಯ ಶ್ರೀ ಗೋಪಾಲರಾಯರು, ಸುದರ್ಶನ ವಿದ್ಯಾ ಮಂದಿರದ ಶ್ರೀ ಅಶ್ವತ್ಥ ನಾರಾಯಣರಾಯರು, ಶ್ರೀ ರಾಮಾದೀಕ್ಷಿತರು, ಶ್ರೀ ಕಡ್ಡಿ ಜಯತೀರ್ಥ ಅವರು ಹೀಗೆ ಅನೇಕರ ಪ್ರೋತ್ಸಾಹವು ಈ ಕೃತಿಯು ಒಂದು ರೂಪಕ್ಕೆ ಬರಲು ಕಾರಣವಾಗಿದೆ.

ಈ ಗ್ರಂಥವು ಬಜಾರಿನಲ್ಲಿ ಮಾರಾಟವಾಗುವ ಗ್ರಂಥವಲ್ಲ. ಆಸ್ತಿಕರು

ಸಂಗ್ರಹಿಸಬಹುದಾದ ಗ್ರಂಥ. ಆದುದರಿಂದ ಅನೇಕರಿಂದ ಈ ಗ್ರಂಥದ ಮುದ್ರಣಕ್ಕೆ ಧನಸಹಾಯವಾದಲ್ಲಿ ಆದಷ್ಟು ಸುಲಭ ಬೆಲೆಯಲ್ಲಿ ಇದನ್ನು ಮುದ್ರಿಸಿ ಈ ಕೃತಿಯನ್ನು ವಾಚಕರಿಗೆ ಒದಗಿಸಬಹುದೆಂಬ ಅಪೇಕ್ಷೆ ಇದೆ. ಯಾರು ಮುಕ್ತ ಹಸ್ತದಿಂದ ಧನಸಹಾಯ ಮಾಡುವರೋ ಅಂಥಹವರ ಹೆಸರನ್ನು ಹಿಂಭಾಗದಲ್ಲಿ ಮುದ್ರಿಸುವ ಅಪೇಕ್ಷೆಯೂ ಇದೆ. ಈ ಗ್ರಂಥದ ವಿಚಾರದಲ್ಲಿ ಪಂಡಿತರ ಅಭಿಪ್ರಾಯ ಸಂಗ್ರಹಿಸಿ ಅದನ್ನೂ ಸಹ ಮುದ್ರಿಸುವ ವಿಚಾರವನ್ನಿಟ್ಟುಕೊಳ್ಳಲಾಗಿದೆ. ಪೂಜನೀಯ ಹಿರಿಯರಾದ ಶ್ರೀಮಾನ್ ಎಸ್.ಆರ್.ರಾವ್. ಅವರು ಈ ಗ್ರಂಥಕ್ಕೆ ಮುನ್ನುಡಿಯನ್ನಿತ್ತಿರುವದು ನನ್ನ ಭಾಗ್ಯ ಅವರಿಗೆ ಕೃತಜ್ಞತೆ ಸಲ್ಲಿಸುವೆ. ಶ್ರೀಯುತರು ಸಮುದ್ರದಲ್ಲಿ ಮುಳುಗಿ ಹೋಗಿರುವ ಶ್ರೀ ಕೃಷ್ಣನ ದ್ವಾರಕಾನಗರವನ್ನು ಹುಡುಕಿ ತೆಗೆದವರು

ತಮ್ಮ

( ಆದ್ಯ ರಾಮಾಚಾರ್ಯ )

ಧನಸಹಾಯ ಮಾಡಬೇಕೆಂಬ ಪ್ರೇರಣೆಯಾದಲ್ಲಿ ಅಂಥವರು ಈ ಕೆಳಗಿನ ವಿಳಾಸಕ್ಕೆ ತಮ್ಮ ಸಂಪೂರ್ಣ ವಿಳಾಸದೊಂದಿಗೆ ಧನಸಹಾಯವನ್ನು ಮಾಡಬಹುದಾಗಿದೆ. ರಿಜಿಸ್ಟರ್ಡ್ ಅಂಚೆಯ ಮೂಲಕ ಅವರಿಗೆ ಪುಸ್ತಕವು ಕೈಸೇರುವಂತೆ ಮಾಡಲಾಗುವುದು.

ಧಾತೃನಾಮ ಸಂವತ್ಸರ
ಆಶ್ವೀಜ ಶುಕ್ಲಪಕ್ಷ
ವಿಜಯದಶಮಿ
21-10-1996
ಬೆಂಗಳೂರು

ಶ್ರೀ ಆದ್ಯ ರಾಮಾಚಾರ್ಯ,
114 : ವೈ, 4ನೇ ಫೇಸ್, 4ನೇ ಮೈನ್,
7ನೇ ಬ್ಲಾಕ್, ಬನಶಂಕರಿ 3ನೇ ಹಂತ,
ಬೆಂಗಳೂರು- 560 085
ದೂರವಾಣಿ : 6692139

# ಗ್ರಂಥಕ್ಕೆ ತಿಲಕ ವಿಟ್ಟವರು

ನಿರುಪಮಗುಣಸಿಂಧು ರ್ನಿತ್ಯ ಲಕ್ಷ್ಮೀಸಮೇತೋ
ನಿಖಿಲನಿಗಮ ವೇದ್ಯೋ ನಿಸ್ತುಲೋ ವೇಂಕಟೇಶಃ।

ನಿಜಚರಣ ಸಮರ್ಚಾಸಕ್ತ ಭಕ್ತೌಘರಕ್ಷೀ
ನಿವಸತು ಹೃದಯೇ ಮೇ ಸ್ವಾಂಘ್ರಿ ಭಕ್ತಿಂ ವಿತನ್ವನ್ ॥

ನಮ್ಮ ಭಾರತಿಯ ವೇದ ಪುರಾಣೇತಿಹಾಸ ಪರಂಪರೆಯಲ್ಲಿ ಅರ್ಚನೆಗೆ ಹೆಚ್ಚು ಪ್ರಾಶಸ್ತ್ಯವಿರುವುದು ಕಂಡುಬರುತ್ತದೆ. ಅದರಲ್ಲೂ ಕಲಿಯುಗದಲ್ಲಿ ಅರ್ಚನೆಯಿಂದಲೇ ಇಹ–ಪರ–ಮೋಕ್ಷಪ್ರಾಪ್ತಿ ಎಂದು ನಿಸ್ಸಂದಿಗ್ಧವಾಗಿ ಮಹರ್ಷಿಗಳು ತಿಳಿಸಿದ್ದಾರೆ.

ಪರಮಾತ್ಮನು ಸರ್ವತ್ರ ವ್ಯಾಪ್ತನಾದರೂ ಭಕ್ತಾನುಗ್ರಹಕ್ಕಾಗಿ ಕೆಲವೆಡೆ ತಾನೇ ಸ್ವಯಂವ್ಯಕ್ತನಾಗುತ್ತಾನೆ. ಅಂತಹವುಗಳಲ್ಲಿ ಸಾಲಿಗ್ರಾಮಗಳು ವಿಶೇಷವಾದವುಗಳು. ಸಾಮಾನ್ಯವಾಗಿ ಎಲ್ಲಾ ವೈದಿಕ ಸಂಪ್ರದಾಯಸ್ಥ ಮನೆಗಳಲ್ಲಿ ಸಾಲಿಗ್ರಾಮಾರ್ಚನೆ ಇಂದಿಗೂ ನಡೆದುಕೊಂಡು ಬರುತ್ತಿರುವುದೇ ಅದರ ಮಹಿಮೆಗೆ ಸಾಕ್ಷಿ. ಇನ್ನು ದೇವಾಲಯಗಳಲ್ಲಿಯೂ ಕೂಡಾ ಮೂಲದೇವರಿಗೆ ನಡೆಯುವಂತೆಯೇ ಅರ್ಚನೆ, ಅಭಿಷೇಕಾದಿಗಳು ಸಾಲಿಗ್ರಾಮಕ್ಕೂ ನಡೆದು, ಸಾಲಿಗ್ರಾಮದ ಅಭಿಷೇಕದ ಜಲವು ಸೇರಿದಾಗಲೇ

ತೀರ್ಥವೆಂಬುದಾಗಿ ಕರೆಯಲ್ಪಟ್ಟು, ಸ್ವೀಕಾರಾರ್ಹವಾಗುತ್ತದೆಂಬುದಾಗಿ ಶಾಸ್ತ್ರಗಳಿಂದ ತಿಳಿದುಬರುತ್ತದೆ.

ಇನ್ನು ಶಾಸ್ತ್ರವಿಧಿಯಂತೆ ನಡೆಯುವ ಅರ್ಚನೆಯಲ್ಲಿ ವಿಶೇಷ ಪಾತ್ರವಹಿಸುವ ವಸ್ತುಗಳೆಂದರೆ ತುಳಸಿ ಮತ್ತು ಶಂಖ. ತುಳಸಿಯ ಮಹಿಮೆಯನ್ನು ವರ್ಣಿಸಬೇಕೆಂದರೆ –

"ಪುಷ್ಕರಾದ್ಯಾನಿ ತೀರ್ಥಾನಿ ಗಂಗಾದ್ಯಾಸ್ಸರಿತಸ್ತಥಾ
ದೇವಾ ದಿವಿಸ್ಥಿತಾ ಯೇ ವೈ ತಿಷ್ಠಂತಿ ತುಳಸೀದಳೇ ॥

ಎಂಬ ಒಂದೇ ಶ್ಲೋಕವು ಸಾಕು. ಇನ್ನು ಶಂಖಾರ್ಚನೆ ಇಲ್ಲದೇ ಅರ್ಚನೆಯು ಸಾಂಗವಾಗುವುದೇ ಇಲ್ಲ. ಪ್ರಸ್ತುತ ನಮ್ಮ ಕನ್ನಡಿಗರೇ ಆದ ಶ್ರೀಮಾನ್ ಆದ್ಯರಾಮಾಚಾರ್ಯರು ಅತ್ಯಂತ ಶ್ರಮಪಟ್ಟು " ಶುಭಂ ಭವತು" ಎಂಬ ಗ್ರಂಥರತ್ನವನ್ನು ರಚಿಸಿದ್ದಾರೆ. ಸಾಮಾನ್ಯವಾಗಿ ಸಾಲಿಗ್ರಾಮಗಳ ಬಗ್ಗೆ ನಮ್ಮ ತಿಳುವಳಿಕೆ ಎಂದರೆ "ಸಾಲಿಗ್ರಾಮ ರೂಪದಲ್ಲಿ ಪೂಜಿಸಲ್ಪಡುವವನು ವಿಷ್ಣು ಒಬ್ಬನೇ, ಮತ್ತು ಅವುಗಳ ರೂಪವೆಂದರೆ ಗುಂಡಾಗಿ ಗೋಲಿಯಂತಿದ್ದು ಕಪ್ಪು ವರ್ಣದಿಂದ ಕೂಡಿದ ಚಕ್ರವನ್ನು ಹೊಂದಿರುತ್ತದೆ" ಎಂಬುದಾಗಿ. ಆದರೆ ಪ್ರಸ್ತುತ ಗ್ರಂಥವನ್ನು ಅವಲೋಕಿಸಿದಾಗ ಅತ್ಯಂತ ಆಶ್ಚರ್ಯವೆನಿಸುವ ವಿಚಾರಗಳು ತಿಳಿದುಬರುತ್ತವೆ. ಸಾಲಿಗ್ರಾಮಗಳ ಉತ್ಪತ್ತಿ-ಮಹಿಮೆ-ಲಕ್ಷಣ-ವರ್ಣ ಮತ್ತು ಹೊಂದಿರುವ ಚಕ್ರಗಳ ಸಂಖ್ಯೆ ಹಾಗೂ ಆಕಾರಗಳಿಂದ ಆ ಸಾಲಿಗ್ರಾಮಗಳಲ್ಲಿ ಸಾನ್ನಿಧ್ಯವಿರುವ ದೇವರುಗಳ ವಿವರ ಅಂತಹ ಸಾಲಿಗ್ರಾಮಗಳ ಆರಾಧನೆಯಿಂದ ಉಂಟಾಗುವ ಫಲ, ಇವುಗಳ ವಿಪುಲವಾದ ಮಾಹಿತಿಯನ್ನು ಲೇಖಕರು ನೀಡಿದ್ದಾರೆ. ಸಾಲಿಗ್ರಾಮಗಳಲ್ಲಿ ದತ್ತಾತ್ರೇಯ-ಷಣ್ಮುಖ-ಹಂಸ-ಪರಮಹಂಸ- ಅಘೋರ-ಸದ್ಯೋಜಾತಾದಿ ಶಿವ ಸಾನ್ನಿಧ್ಯವಿರುವ ವಿಚಾರ ತಿಳಿದಾಗ ವಿಸ್ಮಯವಾಗುತ್ತದೆ.

ಪೂಜೆಯಲ್ಲಿ ಎಲ್ಲರೂ ತುಳಸಿ ಮತ್ತು ಶಂಖವನ್ನು ಬಳಸಿದರೂ ಅವುಗಳ ವಿಚಾರವನ್ನು ತಿಳಿದವರು ಅತ್ಯಂತ ವಿರಳ. ಆ ಕೊರತೆಯೂ ಕೂಡಾ ಈ ಗ್ರಂಥದಿಂದ ನಿವಾರಣೆಯಾಗುತ್ತದೆ.

ಒಟ್ಟಿನಲ್ಲಿ ಶಾಸ್ತ್ರವನ್ನು ತಿಳಿದವರಿಗೂ ಕೂಡಾ ಸಂಗ್ರಾಹ್ಯವಾದ ವಿಚಾರಗಳಿರುವುದು ಈ ಗ್ರಂಥದ ವಿಶೇಷ. ಅರ್ಚಕ-ಆಗಮಿಕ, ವೈದಿಕ ಸಂಪ್ರದಾಯಸ್ಥ ಜನರೆಲ್ಲರೂ ಓದಿ ತಿಳಿಯಲೇ ಬೇಕಾದ ಗ್ರಂಥವಿದು. ಹೇಳಬೇಕೆಂದರೆ ಸಾಲಿಗ್ರಾಮಗಳ ಬಗ್ಗೆ ಇಷ್ಟೊಂದು ವಿಸ್ತಾರವಾದ ವಿಚಾರಗಳ ಗ್ರಂಥ ಕನ್ನಡದಲ್ಲಿ ಇದುವರೆವಿಗೂ ಪ್ರಕಟವಾಗಿಲ್ಲವೆಂದೇ ಹೇಳಬಹುದು. ಆಸಕ್ತ ಜನರು ಗ್ರಂಥವನ್ನು ಓದಿ ಅದರ ಸದುಪಯೋಗವನ್ನು ಪಡೆಯಲಿ. ಸರ್ಕಾರ ಮತ್ತು ಸಾರ್ವಜನಿಕರ ಅಪಾರವಾದ ಪ್ರೋತ್ಸಾಹ ಲೇಖಕರಿಗೆ ದೊರಕಲಿ ಎಂದು ಹಾರೈಸುತ್ತಾ ನನ್ನ ಎರಡು ಮಾತುಗಳನ್ನು ಮುಗಿಸುತ್ತೇನೆ.

ವಿದ್ವಾನ್. ಶ್ರೀ ಎಸ್.ಆರ್. ಶೇಷಾದ್ರಿ ಭಟ್ಟರು

28-6-96

ರಾಜ್ಯ ಸರಕಾರದ ಧಾರ್ಮಿಕ ದತ್ತಿ
ಇಲಾಖೆಯ ಆಗಮ ಪಂಡಿತರು, ಧಾರ್ಮಿಕ ದತ್ತಿ ಕಛೇರಿ
ಆಲೂರು ವೆಂಕಟರಾವ್ ಬೀದಿ, ಬೆಂಗಳೂರು -10

## ಭೂ ವಂದನೆ

ಸಮುದ್ರ ವಸನೇ ದೇವಿ
ಪರ್ವತಸ್ತನ ಮಂಡಲೇ।

ವಿಷ್ಣುಪತ್ನಿ ನಮಸ್ತುಭ್ಯಂ
ಪಾದಸ್ಪರ್ಶಂ ಕ್ಷಮಸ್ವ ಮೇ॥

ಆದಿತ್ಯಾನಾಮಹಂ ವಿಷ್ಣು ಜ್ಯೋತಿಷಾಂ ರವಿರಂಶುಮಾನ್।
ಮರೀಚಿರ್ಮರು ತಾಮಸ್ಮಿ ನಕ್ಷತ್ರಾಣಾಂಮಹಂ ಶಶಿ ॥

ಆದಿತ್ಯರಲ್ಲಿನಾನುಷ್ಣು ಪ್ರಕಾಶವಸ್ತುಗಳಲ್ಲಿ ನಾನು ಪ್ರಕಾಶಬೀರುವ ಸೂರ್ಯ. ಮರುತ್ತರಲ್ಲಿ ನಾನು ಮರೀಚಿ ಮತ್ತು ನಕ್ಷತ್ರಗಳಲ್ಲಿ ನಾನು ಚಂದ್ರ

ಅಶ್ವತ್ಥ: ಸರ್ವವೃಕ್ಷಾಣಾಂ ದೇವರ್ಷಿಣಾಂಚ ನಾರದ:।
ಗನ್ಧರ್ವಾಣಾಂಚಿತ್ರರಥ: ಸಿದ್ಧಾನಾಂ ಕಪಿಲೋಮುನಿ: ॥

ವೃಕ್ಷಗಳಲ್ಲಿ ನಾನು ಅಶ್ವತ್ತಮರ, ಋಷಿಗಳಲ್ಲಿ ನಾನು ನಾರದ, ಗಂಧರ್ವರಲ್ಲಿ ನಾನು ಚಿತ್ರರಥ, ಸಿದ್ಧರಲ್ಲಿನಾನು ಕಪಿಲಮುನಿ

ಆಯುಧಾನಾಯಹಂ ವಜ್ರಂ ಧೇನೂ ನಾಮಸ್ಮಿ ಕಾಮಧುತ್।
ಪ್ರಜನಾಶ್ಚಾಸ್ಮಿ ಕನ್ದರ್ಪ: ಸರ್ಪಾಣಾ ಮಸ್ಮಿವಾಸುಕಿ: ॥

ಆಯುಧಗಳಲ್ಲಿ ನಾನು ವಜ್ರಾಯುಧ ಹಸುಗಳಲ್ಲಿ ನಾನು ಸುರಭಿ ಸಂತಾನೋತ್ಪತ್ತಿ ಕಾರಣಗಳಲ್ಲಿ ಕಾಮದೇವನಾದ ನಾನು ಸರ್ಪಗಳಲ್ಲಿ ವಾಸುಕಿ ಎಂದೆನಿಸುವೆ.

ಬೀಜಂಮಾಂ ಸರ್ವಭೂತಾನಾಂ ವಿದ್ಧಿಪಾರ್ಥ ಸನಾತನಮ್।
ಬುದ್ಧಿ ರ್ಬುದ್ಧಿಮತಾಮಸ್ಮಿ ತೇ ಜಸ್ತೇಜಸ್ವಿನಾಮಹಮ್ ॥

ಹೇ ಪಾರ್ಥ ನಾನು ಎಲ್ಲ ಅಸ್ತಿತ್ವಗಳ ಮೂಲನಾಗಿರುವೆ. ಬುದ್ಧಿವಂತರ ಬುದ್ಧಿ ಹಾಗೂ ಶೌರ್‍ಯವಂತರ ಶೌರ್‍ಯವೂ ನಾನಾಗಿರುವೇ

ನ ಹಿಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ।
ತತ್ ಸ್ವಯಂಯೋಗಸಂಸಿದ್ಧಃ ಕಾಲೇನಾತ್ಮನಿವಿನ್ದತಿ ॥

ವಿಶ್ವದಲ್ಲಿ ಶುದ್ಧವಾದ ಜ್ಞಾನಕ್ಕೆ ಸಮಾನವಾದುದು ಬೇರೊಂದಿಲ್ಲ. ಶುದ್ಧವಾದ ಜ್ಞಾನವು ಪಕ್ವಯೋಗದ ಫಲವೆನಿಸುವದು. ಶ್ರದ್ಧಾಭಕ್ತಿಯಿಂದ ಸೇವೆಯಲ್ಲಿ ನಿರತನಾದವನು ಮುಂದೆವಳ್ಳೆ ಜ್ಞಾನದ ಹಂತವನ್ನು ತಲುಪುತ್ತಾನೆ

ಏತದ್ಯೋನೀನಿ ಭೂತಾನಿ ಸರ್ವಾಣೀತ್ಯುಪಧಾರಯ।
ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ ॥

ಶ್ರೀಷ್ಟಿಯ ಜೀವಿಗಳೆಲ್ಲರಲ್ಲಿ ನಾನಿರುವೆ, ವಿಶ್ವದ ಭೌತಿಕವಾದುದೆಲ್ಲದರ ಹಾಗೂ ಆಧ್ಯಾತ್ಮಿಕವಾದುದೆಲ್ಲದರ ಮೂಲವು ನಾನಾಗಿರುವೆ, ಲಯವೂ ಸಹ ನಾನೇ ಎಂಬುದನ್ನು ತಿಳಿ

ಉದ್ಧರೇದಾತ್ಮನಾತ್ಮಾನಂ ನಾತ್ಮಾನಮದ ಸಾದಯೇತ್।
ಆತ್ಮೈವ ಹ್ಯಾತ್ಮನೋಬುದ್ಧರಾತ್ಮೈವರಿಪು ರಾತ್ಮನಃ ॥

ಮನಸ್ಸಿನ ಸಹಾಯದಿಂದ ಮೇಲೆ ಬರಲು ಯತ್ನಿಸಬೇಕು. ತನ್ನನ್ನೇ ತಾನು ಕೀಳು ಎಂದು ಭಾವಿಸಬಾರದು ಮನವು ಆತ್ಮನ ಮಿತ್ರನೂ ಅಹುದು ಅದೇ ಮನವು ವೈರಿಯಂತೆಯೂ ಆಗಬಹುದು ಆದುದರಿಂದ ಶುದ್ಧ ಮನಸ್ಸಿನಿಂದಿರಿಲು ಯತ್ನಿಸಬೇಕು.

# ಪರಿವಿಡಿ


ಮುಖಪುಟ i-i

ಸಮರ್ಪಣೆ iii

ಪ್ರಕಾಶಕರ ಬಿನ್ನಹ iv

ಮುನ್ನುಡಿ v-vii

ಶ್ರೀ ಎಸ್.ಆರ್.ರಾವ್ ಪರಿಚಯ ನುಡಿ ix-x

ಲೇಖಕನ ಮಾತು xi-xvi

ಗ್ರಂಥಕ್ಕೆ ತಿಲಕ ವಿಟ್ಟವರು xvii-xix

ಸ್ತೋತ್ರಗಳು xx-xxi

ಓಂಕಾರ 1-8

ಸಾಲಿಗ್ರಾಮೋತ್ಪತ್ತಿ : ಹಾಗೂ ಮಹಿಮೆ 9-65

ತುಳಸಿ 66-73

ಶಂಖದ ಹಿರಿಮೆ 74-79

ಅನುಬಂಧಗಳು 80-85

# ಓಂಕಾರ

ನಮಃ ಪರಮ ಋಷಿಭ್ಯೋ ನಮಃ

ಓಂಕಾರ ಪ್ರಭವಾ ದೇವಾ
ಓಂಕಾರ ಪ್ರಭವಾಃ ಸ್ವರಾಃ ||
ಓಂಕಾರ ಪ್ರಭವಂ ಸರ್ವಂ ,
ತ್ರೈಲೋಕ್ಯಂ ಸಚರಾಚರಮ್ ||

---

ಜೀವಿಗೆ ಜನನ, ಮರಣ ಇವು ಎಂದೂ ಬಿಡದ ನಂಟು. ಮೃತ್ಯುರೂಪಿಯಾದ ವ್ಯಾಧನ ಬಾಣ ಪ್ರಯೋಗವು ಯಾವಾಗ ಎಂಥ ಸಂದರ್ಭದಲ್ಲಿ ಆದೀತೆಂದು ಹೇಳಬರುವಂತಿಲ್ಲ. ಮುಕ್ತ ಕೋಟಿಯ ಜೀವರು ಮಾತ್ರ ಈ ಭಯದಿಂದ ದೂರಾದವರು. ಒಂದು ಕಾಲದಲ್ಲಿ ಸಾಮಾನ್ಯ ಮಾನವರಂತೆ ಅವರೂ ಸಹ ಮೃತ್ಯುಭಯದಿಂದ ಹೆದರುತ್ತಿದ್ದರು. ಈ ಭಯದಿಂದ ತಪ್ಪಿಸಿಕೊಳ್ಳುವ ಸನ್ನಾಹದಲ್ಲಿ ಅವರೆಲ್ಲ ನಿರತರಾದರು. ಮೃತ್ಯುವಿನ ಮುಂದೆ ಅವರೆಂದೂ ಶರಣಾಗತರಾಗಲಿಲ್ಲ. ತ್ರಯೀವಿದ್ಯಾ ಎಂಬುದನ್ನು ಸಂಪಾದಿಸುವುದರಲ್ಲಿ ನಿರತರಾದರು. ಅಂದರೆ ಋಕ್,

ಯಜುರ್, ಸಾಮ ಎಂಬ ವೇದತ್ರಯಗಳ ಗುಹೆಯನ್ನೇ ಅವರು ಆಶ್ರಯಿಸಿದರು. ಇಲ್ಲಿ ಛದ್ ಎಂಬ ಧಾತುವಿದೆ. ಅದು ಆಚ್ಛಾದನಾರ್ಥವನ್ನು ಸೂಚಿಸುವಂತಹದು. ಆಚ್ಛಾದನವೆಂದರೆ ಹೊದಿಕೆ. ಒಂದು ಅರ್ಥದಲ್ಲಿ ಅವರು ವೇದತ್ರಯಿಗಳನ್ನು ಹೊದೆದುಕೊಂಡರು. ಆದುದರಿಂದ "ಛಂದಸ್" ಎಂಬ ಸಂಜ್ಞೆಯನ್ನೀಯಲಾಯಿತು.

ಇಷ್ಟು ಮಾತ್ರದಿಂದ ದೇವತೆಗಳಿಗೆ ಬೆನ್ನಟ್ಟಿದ ಮೃತ್ಯು ದೂರಾಗಲಿಲ್ಲ. ನೀರಲ್ಲಿ ಸಂಚರಿಸುತ್ತಿದ್ದ ಮೀನನ್ನು ಕೊಕ್ಕರೆಯು ತನ್ನ ಬಲದಿಂದೆಳೆದುಕೊಳ್ಳುವಂತೆ ಮೃತ್ಯು ಎಲ್ಲಿದ್ದರೂ ತನ್ನ ಸ್ವಾಧೀನಪಡಿಸಿಕೊಳ್ಳುವಂತಹದು. ಆದುದರಿಂದ ದೇವತೆಗಳೆಲ್ಲ ಓಂಕಾರವಿದ್ದಲ್ಲಿ ಧಾವಿಸಿ ಬಂದರು. ವೇದತ್ರಯೀ ಭದ್ರವಾದ ಕೋಟೆ ಎಂದು ಭಾವಿಸಿದಲ್ಲಿ ಓಂಕಾರವೆಂಬುದು ಆ ಕೋಟೆಯ ಒಳಭಾಗದಲ್ಲಿರುವ ಅರಕಿಲ್ಲೆಯಂತಿರುವುದು. ಆ ಕೋಟೆ ತಲುಪುವುದು ಬಹು ಕಷ್ಟಸಾಧ್ಯ. ಈ ಓಂಕಾರವನ್ನಾಶ್ರಯಿಸಿದುದರಿಂದ ಅವರಿಗೆ ಮೃತ್ಯುಭಯದಿಂದ ಸ್ವಲ್ಪ ಉಸಿರಾಡುವಂತಾಯಿತು. ಪ್ರಾಚೀನ ಋಷಿಮುನಿಗಳು ಈ ಓಂಕಾರದ ಮಹತ್ವವನ್ನು ಕುರಿತು ಉಪನಿಷತ್ತುಗಳಲ್ಲಿ ಭರವಸೆಯ ಮಾತುಗಳನ್ನು ಹೇಳಿರುವುದುಂಟು. ಮೃತ್ಯುಭಯದಿಂದ ದೂರಾಗಬಯಸುವವರಿಗೆ ಉಪಾಸನೆ ಬಹುಮುಖ್ಯ. ಈ ಮಾತನ್ನು ನಾವು ಛಾಂದೋಗ್ಯ ಉಪನಿಷತ್ತಿನಲ್ಲಿ ಕಾಣಬಹುದು. ಓಂಕಾರವೆಂದರೆ ತ್ರಯೀವಿದ್ಯೆಯ ಸಾರವೆನಿಸುವುದು. ವೇದಗಳ ಮಹತ್ವ ಅಗಾಧವಾದುದು. ಹೀಗಿದ್ದರೂ ಓಂಕಾರವು ಮಾತ್ರ ಅವೆಲ್ಲವುಗಳಿಗಿಂತ ಮಿಗಿಲಾದುದು. ಅದು ಬಹು ಸಾಮರ್ಥ್ಯವುಳ್ಳದ್ದು. ಅಕ್ಷರ ವಿದ್ಯೆಯ ಮೂಲವೇ ಅದು. ಇಲ್ಲಿ ಅಕ್ಷರ ಎಂದರೆ ನಾಶರಹಿತ ಎಂದರ್ಥ. ಈ ಮಾತನ್ನೇ "ಓಂ ಇತ್ಯೇಕಾಕ್ಷರಂ ಬ್ರಹ್ಮ" ಎಂದಿದ್ದಾರೆ. ಓಂಕಾರವೇ ಬ್ರಹ್ಮಸ್ವರೂಪ. ವೇದಗಳ ಅಭ್ಯಾಸದಿಂದ ಸ್ವರ್ಗಪ್ರಾಪ್ತಿ. ಓಂಕಾರ ಬಲದಿಂದ ಅಮೃತತ್ವವನ್ನು ಪಡೆಯಬಹುದು.

ಓಂಕಾರವೆಂಬುದು ರಸಗಳಲ್ಲಿ ಸರ್ವಶ್ರೇಷ್ಠರಸವು. ಸಕಲಭೂತ ಸಾರವೇ ಪೃಥ್ವಿ. ಜಲದ ಸಾರವೆಂದರೆ ವನಸ್ಪತಿ, ವನಸ್ಪತಿ ಸಾರವೇ ಮಾನವ, ಮಾನವ ಸಾರವೇ ವಾಕ್, ವಾಕ್ ಎಂಬುದರ ಸಾರವೇ ಋಕ್, ಈ ಋಕ್‌ದ ಸಾರವೇ ಸಾಮ. ಸಾಮದ ಸಾರವೇ ಉದ್‌ಗೀಥ. ಈ ಉದ್‌ಗೀಥ ಎಂಬುದನ್ನೇ ಓಂಕಾರವೆನ್ನುವರು. ಇದು ಸರ್ವಸಾರಗಳಿಗಿಂತ ಹಿರಿದಾದುದು. ವಿನೋಬಾಭಾವೆ ಈ ವಿಷಯವನ್ನು ಚೆನ್ನಾಗಿ ವಿಶ್ಲೇಷಣೆ ಮಾಡಿರುವರು.

**ಸ ಏಷ ರಸಾನಾಂ ರಸತಮಃ**
**ಪರಮ : ಪರಾಧ್ಯೋ ಷ್ಟಮೋಽಯ ಉದ್‌ಗೀಥ :**

ಓಂಕಾರಕ್ಕೆ ಪ್ರಣವ ಎಂದೂ, ಉದ್‌ಗೀಥ ಎಂದೂ ಹೆಸರುಗಳಿವೆ. ಅದು ಎರಡು ಮಾರ್ಗವನ್ನು ಸೂಚಿಸುವಂಥದು. ಯಾರಿಗೆ ಯಾವುದು ಸರಿಯೆನಿಸುವುದೋ ಅದನ್ನು ಹಿಡಿಯಬಹುದು. ನವ ಅಂದರೆ ಸ್ತುತಿ ಮಾಡು ಎಂದರ್ಥವು. ಅದಕ್ಕೆ ಪ್ರ ಎಂಬ ಉಪಸರ್ಗವನ್ನು ಜೋಡಿಸಿದಲ್ಲಿ ಪ್ರಣವ ಶಬ್ದದ ಉತ್ಪತ್ತಿಯಾಗುವದು. ಇದರ ಅರ್ಥ ವಿಷ್ಣು–ಪ್ರಕರ್ಷಕ ರೀತಿಯಲ್ಲಿ ಮಾಡಿದ ಸ್ತುತಿ, ಇಲ್ಲವೇ ಸ್ತೋತ್ರ ಎಂದು ಅರ್ಥವಾಗುವದು. ಹಾಗಾದಲ್ಲಿ ಉತ್ತಮವಾದ ಸ್ತೋತ್ರವಾವುದು? ಯಾವುದು ಪರಬ್ರಹ್ಮನನ್ನು ಕುರಿತಾದುದೋ ಅದು. ಇಲ್ಲಿ ಶಬ್ದಗಳನ್ನು ಬುಗುರಿಯಾಡಿಸಬೇಕಾಗಿಲ್ಲ. ಓಂಕಾರವು ಎಲ್ಲ ಶಬ್ದಗಳ ಸ್ತೋತ್ರಗಳನ್ನೂ ಸಮಾವೇಶಗೊಳಿಸುವುದು. ಅದು ಪರಬ್ರಹ್ಮನನ್ನೇ ಸಾಂಕೇತಿಕವೆಂದಿಟ್ಟು ಕೊಂಡಿರುವುದುಂಟು.

ಉದ್‌ಗೀಥ ಎಂಬುದು ಗೈ, ಗಾಯನ ಧಾತುವಿನಿಂದ, ಉತ್ ಎಂಬ ಉಪಸರ್ಗವನ್ನಂಟಿಸುವುದರಿಂದ ಈ ಶಬ್ದವನ್ನು ನಾವು ಕಾಣುತ್ತೇವೆ. ಇದೂ ಸಹ ಉತ್ತಮ ರೀತಿಯ ಗಾಯನ, ಅಥವಾ ಸ್ತೋತ್ರ ಎಂಬ ಅರ್ಥವನ್ನೀಯುತ್ತದೆ. ಒಟ್ಟಿನಲ್ಲಿ ಉತ್ತಮ ಸ್ಥಿತಿಯಲ್ಲಿರುವ ಅಕ್ಷರಗಳನ್ನು ಉಪಾಸನೆ ಮಾಡುವುದು ಎಂದರ್ಥ. ಈ ಉದ್‌ಗೀಥದ ವಿಚಾರದಲ್ಲಿ ಬೇರೆ

ಇನ್ನೂ ಹೆಚ್ಚಿನ ಬೆಳಕನ್ನು ಕಾಣಬೇಕಾದಲ್ಲಿ ಛಾಂದೋಗ್ಯ ಹಾಗೂ ಬೃಹದಾರಣ್ಯಕಗಳನ್ನು ಚೆನ್ನಾಗಿ ಅಭ್ಯಾಸಮಾಡಬೇಕಾಗುವುದು.

ದೇವದಾನವರಿಬ್ಬರೂ ಪ್ರಜಾಪತಿಯ ಸಂತಾನರಾಗಿರುವರು. ಆದರೂ ಅವರಿಬ್ಬರ ಮಧ್ಯದಲ್ಲಿ ಯಾವಾಗಲೂ ಕಲಹಾದಿಗಳು ಇದ್ದೇ ಇರುವುವು. ಅದು ಸ್ವಾಭಾವಿಕ. ಕೆಲವು ಸಂದರ್ಭದಲ್ಲಿ ಅದು ವಿಪರೀತಕ್ಕೆ ಮುಟ್ಟುವುದುಂಟು. ದೊಡ್ಡ ಯುದ್ಧಗಳೇ ಆದುದುಂಟು. ದೇವತೆಗಳು ದೈತ್ಯರನ್ನು ಸಂಹರಿಸುವುದಕ್ಕಾಗಿ ಈ ಉದ್‌ಗೀಥದ ಆಶ್ರಯ ಪಡೆದುಕೊಂಡರು. ಇದು ಮೊದಲು ದೈತ್ಯರಿಗೆ ತಿಳಿದುಬರಲಿಲ್ಲ. ಮೂಗಿನಿಂದ ಹೊರಬರುವ ವಾಯು ಉದ್‌ಗೀಥವಾಗಿರಬಹುದೋ ಎಂದು ಯೋಚಿಸತೊಡಗಿದರು. ಇದನ್ನು ಅಸುರರು ಕೆಡಿಸಲು ಪ್ರಯತ್ನಿಸತೊಡಗಿದರು. ಘ್ರಾಣೇಂದ್ರಿಯಕ್ಕೆ ಹೋಗಿ ಬರುವ ಗಾಳಿಯ ಮೇಲೆ ಅವರು ಪ್ರಹಾರ ಮಾಡತೊಡಗಿದರು. ಇದರಿಂದಾಗಿ ವಾಯು ಮಲಿನವಾಯಿತು. ಸುಗಂಧದ ಬದಲಾಗಿ ಆ ವಾಯು ದುರ್ಗಂಧ ಹೊರಚೆಲ್ಲತೊಡಗಿತು. ಈ ಉಪಾಯವು ನಿರರ್ಥಕವಾದಾಗ ದೇವತೆಗಳು ವಾಣಿಯನ್ನು ಉದ್‌ಗೀಥದ ರೂಪದೊಂದಿಗೆ ಉಪಾಸನೆ ಮಾಡತೊಡಗಿದರು. ವಾಣಿಯ ಮೇಲೆಯೂ ಅಸುರರು ಪಾಪದ ಪ್ರಹಾರ ಮಾಡತೊಡಗಿದರು. ಇದರಿಂದಾಗಿ ಅದೂ ಕೂಡ ಪಾಪಯುಕ್ತವಾಯಿತು. ಅನಂತರದಲ್ಲಿ ಸತ್ಯದೊಂದಿಗೆ ಅಸತ್ಯ ಸ್ಪರ್ಧಿಸಿತು. ಈ ಎಲ್ಲ ಪ್ರಯೋಗಗಳು ಅಸಫಲವಾದುದನ್ನು ಕಂಡಾಗ ದೇವತೆಗಳು ಕಣ್ಣು, ಕಿವಿ, ಮನಸ್ಸು ಇವುಗಳನ್ನು ಉದ್‌ಗೀಥ ರೂಪದಿಂದ ಉಪಾಸನೆ ಮಾಡತೊಡಗಿದರು. ಅಸುರರು ಸುಮ್ಮನಿರುತ್ತಾರೆಯೇ? ಈ ಎಲ್ಲ ಇಂದ್ರಿಯಗಳ ಮೇಲೆ ಅವರು ಪಾಪದ ಭಾರವನ್ನು ಹೊರಿಸಿದರು. ಇದರಿಂದಾಗಿ ಯಾವುದನ್ನು ಕಣ್ಣು ಕಾಣಬಾರದೋ, ಕಿವಿಯು ಯಾವುದನ್ನು ಕೇಳಬಾರದೋ, ದೃಢ ಸಂಕಲ್ಪದಿಂದ ಮನಸ್ಸು ವ್ಯಾಕುಲವಾಗಬಾರದೋ ಅದೆಲ್ಲ ಆಗತೊಡಗಿದವು.

ಈ ವಿಪರೀತಗಳನ್ನೆಲ್ಲ ಅನುಭವಿಸಿದ ನಂತರ ನಿಜವಾದ ಉದ್‌ಗೀಥ ಯಾವುದು ಎಂಬುದನ್ನು ದೇವತೆಗಳು ತಮ್ಮ ಪ್ರಯತ್ನದಿಂದ ಕಂಡುಹಿಡಿದರು.

ಹೃದಯಸ್ಥ ಪ್ರಾಣವನ್ನೇ ಅವರು ಉದ್‌ಗೀಥ'ರೂಪದಲ್ಲಿ ಆರಾಧಿಸತೊಡಗಿದರು. ಅಸುರರು ಅಡ್ಡಿ ಬಂದರೂ ಕೂಡ ಅವರ ಪ್ರಯತ್ನದಿಂದ ಮುಖ್ಯಪ್ರಾಣನಿಗೆ ಯಾವುದೇ ತರಹದ ಪರಿಣಾಮವಾಗಲಿಲ್ಲ. ಅಸುರರಿಗೆ ಬಹುದೊಡ್ಡ ಸೋಲೆನಿಸಿತು. ಅವರು ಮುಖ್ಯ ಪ್ರಾಣನ ಮೇಲೆ ತಮ್ಮ ಬಲಪ್ರಯೋಗ ಮಾಡಲು ಯೋಚಿಸಿದರು. ಗಾಜು ಕಲ್ಲಿನ ಮೇಲೆ ಬಿದ್ದರೆ ಹೇಗಾಗಬೇಕೋ ಹಾಗಾಯಿತು ಅವರ ಸ್ಥಿತಿ.

ಉಪನಿಷತ್ತಿನ ಋಷಿಗಳು ಹೃದಯಸ್ಥನಾದ ಪ್ರಾಣನು ಪಾಪರಹಿತನಾಗಿದ್ದಾನೆಂದು ನಿರ್ಧರಿಸಿದರು. ಆತನಲ್ಲಿ ಸ್ವಾರ್ಥವೆಂಬುದಿಲ್ಲ. ''ಲೋಭಮೂಲಾನಿ ಪಾಪಾನಿ'' ಎಲ್ಲ ಪಾಪಗಳಿಗೆ ಲೋಭ ಮೂಲ ಕಾರಣ. ಆದರೆ ಪ್ರಾಣದೇವನು ತಿಂದುದನ್ನು, ಕುಡಿದುದನ್ನು ತನ್ನ ಪಾಲಾಗಿ ಸ್ವೀಕರಿಸುವುದಿಲ್ಲ. ಆದುದರಿಂದಲೇ ಆತನು ಸಕಲೇಂದ್ರಿಯಗಳಲ್ಲಿ ಶ್ರೇಷ್ಠನಾದವನು. ಈ ಪ್ರಾಣನೊಂದಿಗೆ ಉದ್‌ಗೀಥವನ್ನು ಜೋಡಿಸಿದಲ್ಲಿ ಪ್ರಣವ ಎಂಬುದು ಹುಟ್ಟುವುದು. ಇದು ಋಷಿಗಳು ಮಾಡಿಕೊಂಡ ನಿರ್ಧಾರವು.

ಛಾಂದೋಗ್ಯದಲ್ಲಿ ಮೂಲಭೂತವಾದ ದಾಂಪತ್ಯದ ಕಲ್ಪನೆ ಮಾಡಲಾಗಿದೆ. ''ತದ್ವಾ ಏತನ್ಮಿಥುನಂ ಯದ್ವಾಕ್ ಪ್ರಾಣಶ್ಚ'' ಅಂದರೆ ವಾಣಿ ಹಾಗೂ ಪ್ರಾಣ ಇವರು ಒಂದೆಡೆ ಮಿಳಿತರಾದರು ಎಂದರ್ಥ. ಇವರಿಬ್ಬರ ಸಂಯೋಜನೆಯಿಂದಾಗಿ ಓಂಕಾರದ ಉಚ್ಚಾರವಾಗುತ್ತದೆ. ಇದನ್ನು ಸ್ವಲ್ಪ ಬಿಡಿಸಿ ಹೇಳಬೇಕೆಂದರೆ ಓಂಕಾರ ರೂಪೀ ಬಾಲಕನನ್ನು ವಾಣಿ ಹಾಗೂ ಪ್ರಾಣರು ರಕ್ಷಿಸುತ್ತಾರೆ ಎಂದರ್ಥ.

ಪ್ರಣವಕ್ಕೆ ಅಮೃತತ್ವದ ಪ್ರಾಪ್ತಿಯಾಗಬೇಕಾಗಿದ್ದಲ್ಲಿ ಓಂಕಾರರೂಪ ಅದರ ಉಪಾಸನೆಯನ್ನು ಮಾಡಬೇಕು. ಸೂರ್ಯ ಹಾಗೂ ಪ್ರಾಣ ಇವರಿಬ್ಬರೂ ಸಮಪ್ರಮಾಣರೇ. ಹೇಗೆ ಸೂರ್ಯ ದೇವನು ಶಾಖವನ್ನೀಯುವನೋ ಹಾಗೆ ಜೀವನಿಗೆ ಅಗತ್ಯವಾದ ಉಸಿರನ್ನು ದಯಪಾಲಿಸುವವನು ಪ್ರಾಣದೇವನು. ಸೂರ್ಯ ಎಂದರೆ ಸ್ವರ. ಅದಕ್ಕೂ ಮುಂದಿನ ಭಾಗದಲ್ಲಿ ಹೇಳಬೇಕೆಂದರೆ ಗತಿಮಾನ್. ಪ್ರಾಣನೂ ಹಾಗೆಯೆ.

ದೇಹದಲ್ಲಿಯ ಈ ಪ್ರಾಣ ಹಾಗೂ ಪ್ರಕಾಶಮಾನನಾದ ಸೂರ್ಯ ಇವರಿಬ್ಬರ ಉಪಾಸನೆಯನ್ನು ಓಂಕಾರ ರೂಪದಲ್ಲಿ ಮಾಡಬಹುದು. ಈ ಪ್ರಾಣವನ್ನು ಯಾರು ಒಲಿಸಿಕೊಳ್ಳುತ್ತಾರೆಯೋ ಅವರನ್ನು ಅಂಗೀರಸರು ಎಂದು ಗುರುತಿಸುವುದುಂಟು. ಬೃಹಸ್ಪತಿಯೂ ಸಹ ಉದ್‌ಗೀಥರೂಪದಿಂದ ಉಪಾಸನೆಯನ್ನು ಮಾಡಿದುದುಂಟು. ವಾಣಿ ಎಂದರೇನೆ ಬೃಹತಿ. ಅವಳ ಪತಿಯೇ ಪ್ರಾಣ. ಇವರಿಬ್ಬರನ್ನೂ ಬೃಹಸ್ಪತಿ ಎಂದು ಸಂಭೋದಿಸುವುದುಂಟು.

ಓಂಕಾರದಲ್ಲಿ ಆಕಾರ ಉಕಾರ ಮಕಾರ ಹೀಗೆ ಮೂರು ವರ್ಣಗಳಿವೆ. ಇವುಗಳನ್ನು ಮಾತ್ರಾಗಳು ಎಂದೆನ್ನುವುದುಂಟು. ಅಲ್ಲದೇ ಸಂದರ್ಭೋಚಿತವಾಗಿ ಬೇರೆ ಬೇರೆ ಅರ್ಥಗಳೂ ಉಂಟು. ಬ್ರಹ್ಮಾಂಡವನ್ನು ಕುರಿತು ಯೋಚಿಸತೊಡಗಿದಾಗ ಆ ಗೋಲವು ಈ ಮೂರು ಮಂತ್ರಗಳಿಂದ ವಿಭಜಿಸಲ್ಪಟ್ಟಿರುವುದು. ಹೇಗೆಂದರೆ ಇದರಲ್ಲಿಯ ಆ ಎಂದರೆ ಪೃಥ್ವಿ. ಉ ಎಂದರೆ ಅಂತರಿಕ್ಷ. ಮ್ ಎಂದರೆ ದ್ಯೌಲೋಕವು. ಇದು ವಿಶ್ವದ ಅವಸ್ಥಾತ್ರಯ ವೆಂದೆನಿಸುವುದು. ಅಕಾರವು ಉತ್ಪತ್ತಿಯನ್ನು, ಉಕಾರವು ಸ್ಥಿತಿಯನ್ನು, ಮಕಾರವು ಲಯವನ್ನು ಪ್ರದರ್ಶಿಸುವುದು. ಇದೇ ರೀತಿಯಲ್ಲಿ ಜೀವಾತ್ಮನ ಅವಸ್ಥೆಯಾದರೂ ವಿಶ್ವ, ತೈಜಸ, ಪ್ರಾಜ್ಞಗಳಿಂದ ಕೂಡಿದುದಾಗಿದೆ.

ವೈಶ್ವಾನರನು ಆತ್ಮನೆಂದೆನಿಸಿಕೊಳ್ಳುವವನು. ಆತ ಸರ್ವ ಶಬ್ದವಾಚ್ಯ ಹಾಗೂ ವ್ಯಾಪ್ತಿಯುಳ್ಳವನು. ಓಂಕಾರದಲ್ಲಿರುವ ಆಕಾರವನ್ನು ಹೆಚ್ಚು ಬಲವಾಗಿ ಧ್ಯಾನ ಮಾಡುವುದರಿಂದ ಅಂಥವರಿಗೆ ಆದಿಭೌತಿಕ ಐಶ್ವರ್ಯವು ಪ್ರಾಪ್ತವಾಗುವುದು. ಇವರು ವ್ಯಾಸಂಗಿಗಳಾಗಿ, ತಪಸ್ವಿಗಳಾಗಿ ಬಹು ವರ್ಚಸ್ಸಿನಿಂದ ಕೂಡಿದವರಾಗಿರುವರು. ಲೋಕವು ಇಂಥ ಮಹನೀಯರನ್ನು ಪೂಜನೀಯ ಸ್ಥಾನದಲ್ಲಿ ಕಾಣುವುದುಂಟು.

ಇನ್ನು ಉಕಾರವು ಸ್ವಪ್ನಾವಸ್ಥೆಯಲ್ಲಿರುವ ತೈಜಸ ಎಂಬ ಹೆಸರಿನಿಂದ ಗುರುತಿಸಲ್ಪಡುವ ಆತ್ಮವು. ಉಕಾರವು ಉತ್ಪತ್ತಿ ಉತ್ಕ್ರಾಂತಿಯ ಸೂಚಕವು. ಉಕಾರವು ಹಿಂದಿನ ಹಾಗೂ ಮುಂದಿನ ಮಾತುಗಳಿಗೆ ಸಂಬಂಧವಿರು ವಂತಹುದು. ಅದಿಭೌತಿಕ ಐಶ್ವರ್ಯದೊಂದಿಗೆ ಆದಿದೈವಿಕವಾದ ಸಾಮರ್ಥ್ಯವು

ಬೇಕಾಗಿದ್ದಲ್ಲಿ ಪ್ರಣವೋಪಾಸಕರು ಉಕಾರದ ಮೇಲೆ ಹೆಚ್ಚಿನ ಧ್ಯಾನವನ್ನೀಯ ಬೇಕಾಗುವುದು. ಉಕಾರವು ತೇಜೋರೂಪಿಯಾದ ಸೂರ್ಯದೇವನ ಅಂಶವೆನಿಸುವುದು. ಆ ದೇವನ ಅನುಗ್ರಹಬಲದಿಂದ ಮಾನವನಿಗೆ ತೇಜಸ್ಸು ಪ್ರಾಪ್ತವಾಗುವದು.

ಇನ್ನು ಮೂರನೆಯ ಮಾತ್ರಾ ಮಕಾರ. ಇದು ಸುಷುಪ್ತಾವಸ್ಥೆಯಲ್ಲಿರುವ ಪ್ರಾಜ್ಞರೂಪನಾದ ಆತ್ಮ ಎಂದೆನಿಸಿಕೊಳ್ಳುವುದು. ಈ ಮಾತ್ರಾದಲ್ಲಿ ಹೆಚ್ಚು ಗಮನವೆನ್ನಿತ್ತರೆ ಅಂಥಹವರಿಗೆ ಬ್ರಹ್ಮಸಾಕ್ಷಾತ್ಕಾರವು ಲಭಿಸುವುದು. ಅಂದರೆ ಜೀವನು ಮೃತ್ಯುರಹಿತನಾಗುವನು.

ಈ ಮೂರೂ ಮಾತ್ರಾಗಳೆಂದರೆ ಮೂರು ಶಕ್ತಿಗಳೆಂಬು ಹೇಳಬಹುದು. ಇಂದ್ರಿಯಗಳಿಂದ ಗಳಿಸುವ ಕರ್ಮವು ಮಾನಸ ಕರ್ಮವೆನಿಸುವುದು. ಸಾಧಕನಾದವನು ತನ್ನ ಅಂತರ್ಬಾಹ್ಯ ಕರ್ಮಾದಿಗಳಲ್ಲಿ ಯೋಗ್ಯರೀತಿಯಲ್ಲಿ ಈ ಶಕ್ತಿಗಳನ್ನು ಪರೀಕ್ಷಿಸಿಕೊಳ್ಳಬೇಕು. ಮುಂದಿನ ಅರ್ಧ ಮಾತ್ರಾ. ಇದು ಸರ್ವತೋಮುಖವಾದ ಸಹಿಷ್ಣುತೆಯನ್ನು ಹಾಗೂ ಭಗವದ್ಭಾವವನ್ನು ಸೂಚಿಸುವುದು. ಹಾಗೂ ಪಾಪಪುಣ್ಯದಿಂದ ಅಲಿಪ್ತವೆಂದೆನಿಸಿಕೊಳ್ಳುವುದು. ಓಂ ಶಾಂತಿ : ಓಂ ಶಾಂತಿ : ಓಂ ಶಾಂತಿ : ಹೀಗೆ ಮೂರು ಸಲ ಪಠಿಸುವುದರಿಂದ ಜೀವನಿಗೆ ಅಂತಸ್ಥವಾದ ಶಾಂತಿಯು ಲಭಿಸುವುದು. ಈ ಮಾತ್ರಾ ನಮ್ಮ ಕೈವಶವಾದಲ್ಲಿ ಸಾಧಕನಾದವನಿಗೆ ವಿಶ್ವವ್ಯಾಪ್ತಿಯ ಅರಿವಾಗತೊಡಗುವದು. ಆತನ ಅನುಭವ ಬೆಳೆಯುತ್ತ ಹೋಗುವದು. ಆದುದರಿಂದಲೇ ಯಜ್ಞ, ಯಾಗ, ಜಪ, ತಪ ಮೊದಲಾದ ಕ್ರಿಯೆಗಳನ್ನಾರಂಭಿಸುವಾಗ ಓಂಕಾರದಿಂದಲೇ ಪ್ರಾರಂಭ ಮಾಡುವ ಸಂಪ್ರದಾಯವಿದೆ. ಈ ವಿಚಾರವನ್ನು ಕುರಿತು ಗೀತೆಯಲ್ಲಿ,

> ತಸ್ಮಾ ದೋಮಿ ತ್ಯುದಾಹೃತ್ಯ
> ಯಜ್ಞದಾನ ತಪಃ ಕ್ರಿಯಾಃ
> ಪ್ರವರ್ತಂತೇ ವಿಧಾನೋಕ್ತಾಃ
> ಸತತ- ಬ್ರಹ್ಮವಾದಿನಾಮ್

ಎಲ್ಲ ಯಾಗಾದಿಗಳನ್ನು ಓಂಕಾರ ಮಂತ್ರದಿಂದಲೇ ಆರಂಭಿಸಿದುದುಂಟು. ಯಾಕೆಂದರೆ ಅದು ಪ್ರೇರಣೆಯ ಸೂಚಕ. ಕೆಲವು ಸಂದರ್ಭಗಳಲ್ಲಿ ಅಧ್ವರ್ಯ ಪದಾದಿಯಲ್ಲಿದ್ದವರಿಗೆ ಬ್ರಹ್ಮನಿಂದಾಗಲೀ, ಇಲ್ಲವೇ ಯಜಮಾನನಿಂದಾಗಲೀ ಅಪ್ಪಣೆಯನ್ನೀಯುವಾಗಲೂ ಕೂಡ ಸಂಜ್ಞಾರ್ಥರೂಪದಲ್ಲಿ ಓಂ ಎಂದು ಹೇಳುವುದುಂಟು. ಯಾಕೆಂದರೆ ಬ್ರಹ್ಮವಿದ್ಯೆಯ ಗುಟ್ಟೆಲ್ಲ ಈ ಓಂಕಾರದಲ್ಲಿ ಅಡಕವಾಗಿರುವುದರಿಂದ ಅದು ಮಾನವನಿಗೆ ವರವಾಗಿ ದೊರೆಯುವಂತಾಯಿತು. ಸಕಲ ಪುರುಷಾರ್ಥಗಳ ಸಿದ್ಧಿಯು ಈ ಓಂಕಾರದಲ್ಲಿ ಅಡಕವಾಗಿರುವುದೆಂಬುದನ್ನು ತಿಳಿದು ಆಚರಿಸುವರಲ್ಲಿಯೇ ಮಾನವನ ಕಲ್ಯಾಣವಿರುವುದು.

– ।

ಓಂ ಭದ್ರಂ ಕರ್ಣೇಭಿಶ್ಶೃಣುಯಾಮ ದೇವಾಃ।

– । ।

ಭದ್ರಂ ಪಶ್ಯೇ ಮಾಕ್ಷಬಿರ್ಯಜತ್ರಾಃ।

॥ ।

ಸ್ಥಿರೈ ರಂಗೈ ಸ್ತುಷ್ಟುವಾಗ್ಂ ಸಸ್ತನೂಭಿಃ।

– । । ।

ವ್ಯಶೇಮ ದೇವ ಹಿತಂ ಯದಾಯುಃ

☆☆☆☆

ಸರ್ವಲೋಕ ಶರಣ್ಯಾಯ
ಮಂಗಲಂ ಪರಮಾತ್ಮನೆ।

ಮಂಗಲಂ ಗುರುವರೇಭ್ಯಃ
ಸರ್ವ ಲೋಕಾಯ ಮಂಗಲಂ॥

# ಸಾಲಿಗ್ರಾಮೋತ್ಪತ್ತಿ : ಹಾಗೂ ಮಹಿಮೆ

ಶ್ರೀಶಾಯ ನಮಃ

ವೇದಸಾರಮಿದಂ ತಂತ್ರಂ
ತಸ್ಮಾದ್ವೈದಿಕ-ಮಾಚುರೇತ್ ।
ವೇದಾಂತಾರ್ಥಮಿದಂ
ಜ್ಞಾನಂ ಸಿದ್ಧಾಂತಂ ಪರಮ ಶುಭಮ್ ॥

---

ಶ್ರೀಕೃಷ್ಣಂ ಗೋಪಿಕಾನಾಥಂ । ಪ್ರಣಮ್ಯ ಜಗತಾಂ ವಿಭುಮ್ ॥
ಗ್ರಂಥಾನ್ ಬಹೂನ್ ಸಮಾಲೋಕ್ಯ । ಶ್ರುತ್ವಾಗುಹ್ಯಾನ್-ಕ್ವಚಿತ್ ಕ್ವಚಿತ್ ॥

ವಿಶ್ವಕ್ಕೆ ಒಡೆಯನಾದ ಶ್ರೀಕೃಷ್ಣನಿಗೆ ನಮಸ್ಕರಿಸಿ, ಅನೇಕ ಗ್ರಂಥಗಳ ಪರಿಶೀಲನಾ ನಂತರ ಮತ್ತು ನಮ್ಮ ಹಿರಿಯರಿಂದ ಕೇಳಿ ತಿಳಿದುಕೊಂಡ ಈ ವಿಷಯವು ಎಲ್ಲ ಭಕ್ತರಿಗೂ ಪರಿಚಯ ಮಾಡಿಕೊಡಲು ಶ್ರೀಶಾನುಗ್ರಹ ಪಡೆದು, ಆರಂಭಿಸಿದ್ದೇನೆ. ಈ ವಿಷಯವು ಹೇಗೆ ಪ್ರಚುರವಾಯಿತೆಂಬುದನ್ನು ಮೊದಲು ತಿಳಿಸುವೆ.

ವಿಷ್ಣುನಾ ಗರುಡಾಯೋಕ್ತಂ। ಬ್ರಹ್ಮಣಾ ನಾರದಾಯಚ ॥
ಸಾಲಗ್ರಾಮ ಶಿಲಾಭೇದಂ ॥ ಗ್ರಾಹ್ಯಾಗ್ರಾಹ್ಯಫಲಂ ತಥಾ ॥

ವಿಶ್ವೇಶ್ವರನಾದ ಮಹಾವಿಷ್ಣು ಗರುಡನಿಗೆ, ಈ ಸಾಲಿಗ್ರಾಮಗಳ ಮಹತಿಯನ್ನು ತಿಳಿಸಿದನು. ನಂತರ ಬ್ರಹ್ಮದೇವನು ನಾರದರಿಗೆ ಈ ವಿಷಯವನ್ನು ತಿಳಿಸಿದರು.

ದ್ವಾರಕಾನಂ ತಥಾಕ್ಷೇತ್ರಂ। ಮೂರ್ತೀನಾಂ ಲಕ್ಷಣಂ ತಥಾ ॥
ಇತ್ಯಾದಿ ಸರ್ವಮಾಮಂತ್ಯ । ವಕ್ಷ್ಯೇ ಹಂ ಸಾಧುತುಷ್ಟಯೇ ॥

ಯಾರು ಸಾಲಗ್ರಾಮಗಳನ್ನು ಪೂಜಿಸಲು ಅಪೇಕ್ಷಿಸುವರೋ ಅಂಥ ಸಜ್ಜನರ ಮನಸ್ಸಂತೋಷಕ್ಕಾಗಿ ಸಾಲಗ್ರಾಮ ದೊರೆಯುವ ಸ್ಥಳ ಹಾಗೂ ಅವುಗಳ ವದನ ಅಂದರೆ ದ್ವಾರಚಕ್ರಗಳು, ಅವುಗಳ ಉದ್ದಳತೆಗಳು ಮತ್ತು ಲಕ್ಷಣಗಳು ಶಾಸ್ತ್ರಗ್ರಂಥದಲ್ಲಿ ಹಾಗೂ ವಿದ್ವಾಂಸರಲ್ಲಿ ಕೇಳಿ ಸಂಗ್ರಹಿಸಲಾದ ವಿಚಾರಗಳನ್ನೆಲ್ಲ ಇಲ್ಲಿ ಕೊಡಲಾಗಿರುವುದು.

ಆಸೀದವಂತಿದೇಶೇ ನಾಮ್ನಾತು ಹರಿಪರ್ವತಃ ॥
ಸಾಲಗ್ರಾಮ ಇತಿಕ್ಷೇತ್ರಂ। ಹರಿಚಕ್ರ ಶಿಲಾಮಯಮ್ ॥

ಆವಂತಿ ದೇಶದಲ್ಲಿ ಹರಿಪರ್ವತವೆಂಬ ಹೆಸರಿನ ಮಹಾ ಪವಿತ್ರವಾದ ಪರ್ವತವಿದೆ. ಅಲ್ಲಿ ಸಾಲಗ್ರಾಮವೆಂಬ ಕ್ಷೇತ್ರವಿದೆ. ಅಲ್ಲಿ ಕಾಣಸಿಗುವ ಶಿಲೆಗಳೆಲ್ಲ ಹರಿಚಕ್ರಗಳಿಂದ ಕೂಡಿವೆ. ಅಲ್ಲಿ ದೊರೆಯುವ ಸಾಲಗ್ರಾಮಗಳ ಹೆಸರನ್ನು ಸ್ಮರಣೆ ಮಾಡುವ ಮಾತ್ರದಿಂದ ಸರ್ವಪಾಪಗಳು ಪರಿಹಾರವಾಗುತ್ತವೆ. ನಿಮಗೆಲ್ಲ ನಿಖರವಾದ ಸ್ಥಳವನ್ನೇ ಮುಂದೆ ಹೇಳುತ್ತೇನೆ.

ಗಂಡಕ್ಯಾಶ್ಚೋತ್ತರೇ ತೀರೇ। ಗಿರಿರಾಜಸ್ಯ ದಕ್ಷಿಣೇ ॥
ಕ್ಷೇತ್ರಂತು ವಿಷ್ಣುಸಾನ್ನಿಧ್ಯಾತ್ ಸರ್ವಕ್ಷೇತ್ರೋತ್ತಮೋತ್ತಮಂ ॥

ಗಂಡಕೀ ನದಿಯ ಉತ್ತರ ದಿಕ್ಕಿನಲ್ಲಿ ಗಿರಿರಾಜವೆಂಬ ಹೆಸರಿನಿಂದ ಗುರುತಿಸಲಾಗುವ ಹಿಮವತ್ಪರ್ವತದ ದಕ್ಷಿಣಭಾಗದಲ್ಲಿ ಒಂದು ಸ್ಥಳವಿದೆ. ಆ ಸ್ಥಳದಲ್ಲಿ ಸಾಕ್ಷಾತ್ ವಿಷ್ಣುವಿನ ವಾಸಸ್ಥಾನವಿದೆ ಎಂಬ ನಂಬಿಕೆ: ಆದುದ ರಿಂದ ಎಲ್ಲ ಕ್ಷೇತ್ರಗಳಿಗಿಂತ ಆ ಸ್ಥಳವು ಬಹು ಪವಿತ್ರವಾದುದಾಗಿದೆ. ಒಟ್ಟಿನಲ್ಲಿ ಆ ಸ್ಥಳದಲ್ಲಿ ನಾನಾ ವಿಧವಾದ ಸಾಲಗ್ರಾಮಗಳನ್ನು ನಾವು ಆಸ್ಥಳದಲ್ಲಿ ನೋಡ ಬಹುದು. ಆ ಚಕ್ರ ನದಿಯ ಉತ್ತರ ಭಾಗದಲ್ಲಿ ವಿಶೇಷ ಪುಣ್ಯ ಫಲವನ್ನೀ ಯುವ ವಿಷ್ಣುರೂಪಗಳಿಂದ ಕೂಡಿದ ನಾನಾ ಸಾಲಗ್ರಾಮಗಳನ್ನು ಅಲ್ಲಿ ಕಾಣ ಬಹುದು.ಅಂಥವುಗಳನ್ನು ಬಹು ಪರಿಶ್ರಮದಿಂದ ದೊರಕಿಸಿಕೊಂಡು ಶ್ರದ್ಧಾಭಕ್ತಿ ಯಿಂದ ಪೂಜಿಸಿದಲ್ಲಿ ಚತುರ್ವಿಧ ಪುರುಷಾರ್ಥಗಳನ್ನು ನಾವು ಹೊಂದಬಹುದು.

ಹಿರಣ್ಯವಜ್ರಕೀಟೇನ। ನಿರ್ಮಿತಂ ಚಕ್ರಮುತ್ತಮಂ॥
ಪೀತಪದ್ಮಾದಿಭೇದೇನ। ಚಕ್ರಂ ಬಹುವಿಧಂಸ್ಮೃತಮ್॥

ಹಿರಣ್ಯ ವಜ್ರಕೀಟದಿಂದ ನಿರ್ಮಿಸಲ್ಪಟ್ಟ ಚಕ್ರಗಳಿದ್ದಲ್ಲಿ ಅದು ಬಹು ಉತ್ತಮ ಸಾಲಿಗ್ರಾಮವೆಂದು ತಿಳಿಯಬೇಕಲ್ಲದೆ ಇವುಗಳಲ್ಲಿ ಪೀತಪದ್ಮಾದಿ ಭೇದಗಳಿರುವುದನ್ನ ಅರಿತುಕೊಳ್ಳಬೇಕು.

ತತ್ರೈವ ಗಂಡಕೀಖ್ಯಾತಾ। ನದೀಪಾಪಪ್ರಣಾಶಿನೀ॥
ತಜ್ಜಲ ಸ್ಪರ್ಶಮಾತ್ರೇಣ। ವಿಷ್ಣುಸಾಯುಜ್ಯಮಾಪ್ನುತೇ॥

ಇಲ್ಲಿ ಹರಿಯುವ ಗಂಡಕಿ ನದಿಯ ಪ್ರವಾಹದ ನೀರನ್ನು ಸ್ಪರ್ಶ ಮಾಡಿದರೂ ವಿಷ್ಣು ಸಾಯುಜ್ಯವು ಲಭಿಸುವುದು. ಆ ನದಿಯು ಹರಿಯುವ ಪರ್ವತದ ಆಶ್ರಯದಲ್ಲಿ ಚಂದ್ರತೀರ್ಥವೆಂಬುದಿರುವುದು. ಆ ನದಿಯು ಬ್ರಹ್ಮಾದಿಗಳಿಂದ ಪೂಜಿಸಿಲ್ಪಟ್ಟಿದ್ದು, ಅನೇಕ ತೀರ್ಥಗಳಿಂದ ಕೂಡಿದುದಾಗಿದೆ. ಅಲ್ಲಿಂದಲೇ "ತತ್ರ ಚಕ್ರ ನದೀನಾಮ ತೀರ್ಥಂ ಬ್ರಹ್ಮಾದಿ ಸೇವಿತಂ" ಚಕ್ರ ನದಿಯು ಉದ್ಭವವಾಗಿರುವದು. ಆ ನದಿಯ ಉತ್ತರಕ್ಕೆ ಇರುವ ಪರ್ವತವು ವಿಷ್ಣುವಿಗೆ ಬಹು ಪ್ರೀತಿಪಾತ್ರವಾದ ಸ್ಥಳವಾಗಿರುವದು.

ತಚ್ಛಾಯಾಗರ್ಭಿತಾಸ್ತತ್ರ। ಪಾಷಾಣಾಶ್ಚ ಖಗೇಶ್ವರ ॥
ಮಚ್ಚಿಹ್ನಾತ್ ಚಿಹ್ನಿತಾಶ್ಚೈವ। ತರವೋಧರಣೀತಲೇ ॥

ಆ ನದಿಯ ಪ್ರವಾಹದಲ್ಲಿ ದೊರೆಯುವ ಶಿಲೆಗಳೆಲ್ಲ ಮಹಾವಿಷ್ಣುವಿನ ಒಂದೊಂದು ಚಿಹ್ನೆಗಳಿಂದ ರೂಪಿತವಾಗಿರುವುವು. ಈ ಮಾತು ಕೇವಲ ಶಿಲೆಗಳಿಗೆ ಮಾತ್ರ ಅನ್ವಯವಲ್ಲ. ಅಲ್ಲಿರುವ ಮರಗಳಲ್ಲಿಯೂ ಸಹ ನಾವು ವಿಷ್ಣುವಿನ ಚಿಹ್ನೆಗಳನ್ನು ಕಾಣಬಹುದು.

ನರಾಣಾಮಪಿ ಪಕ್ಷೀಂದ್ರ। ಕಿಂಚಿತ್ಕಾಲ ನಿವಾಸಿನಾಮ್।
ಸರ್ವಾಂಗೇಷು ಭವೇಚ್ಚಕ್ರಂ। ಮಸ್ತಕೇಸ್ಪಷ್ಟಮೇವವಾ ॥

ಎಲೈ ಗರುಡನೇ, ಆ ಕ್ಷೇತ್ರದಲ್ಲಿ ವಾಸಮಾಡಲು, ಅಥವಾ ಅಲ್ಲಿಯೇ ಉಳಿದುಕೊಂಡಲ್ಲಿ ಅಂಥವರಲ್ಲಿಯೂ ಸಹ ಚಕ್ರಗಳನ್ನುನಾವು ಕಾಣಬಹುದು. ಆ ಕ್ಷೇತ್ರವು ಮಾನವರಿಗೆ ಮಾತ್ರವಲ್ಲ. ಅಲ್ಲಿ ವಾಸಿಸುವ ಮೃಗಪಕ್ಷಿ ಗಳಲ್ಲಿಯೂ ಸಹ ಚಂಕ್ರಾಂತಿತಗಳನ್ನು ನಾವು ಕಾಣಬಹುದು. ಆ ನದಿಯ ತಟಾಕದಲ್ಲಿ ಅನ್ನದಾನಾದಿಗಳನ್ನು ಮಾಡುವದರಿಂದ ವಿಶೇಷ ಫಲವು ಪ್ರಾಪ್ತಿಯಾಗುವದೆಂದು ಹೇಳುವರು.

ತಸ್ಮಿನ್ ಪರ್ವತ ತೀರ್ಥೇಚ। ಸಾಕ್ಷಾಚ್ಚಕ್ರಧರೋ ಹರಿಃ ॥
ಲಕ್ಷ್ಮ್ಯಾಧರಿತ್ರ್ಯಾ ಸಹಿತಾ। ಸಾನ್ನಿಧ್ಯಂ ಕುರುತೇಮುನೇ ॥

ಹೇ ನಾರದ, ಆ ತೀರ್ಥದಲ್ಲಿ ಲಕ್ಷ್ಮೀ ಧರಿತ್ರೀ ಸಹಿತ ಸಾಕ್ಷಾತ್ ಚಕ್ರ ಧರನಾದ ಸ್ವಾಮಿಯ ಸನ್ನಿಧಾನವಿರುವದು.

ತಸ್ಯೋತ್ತರೇ ಮಹಾಶೃಂಗೇ। ಮಮಪ್ರೀತಿಕರಂ ಸದಾ ॥
ತಚ್ಛಿಲಾಸು ಸರ್ವಾಸು। ಮಮಕ್ಷೇತ್ರಗತಾಸು ಚ ॥

ಈ ಚಂದ್ರತೀರ್ಥದ ಉತ್ತರ ಭಾಗದಲ್ಲಿ ಮಹಾಶೃಂಗವೆಂಬ

ಪರ್ವತವಿರುವದು. ಇದು ಚತುರ್ಮುಖ ಬ್ರಹ್ಮನಿಗೆ ಬಹು ಪ್ರಿಯವಾದ ಸ್ಥಳವಾಗಿರುವದು.

ಶೀತವಾತವಿನಿರ್ಮುಕ್ತೇ। ಶೈಲಗರ್ಭೇಖಗೇಶ್ವರಃ ।
ಸರ್ವಲಕ್ಷಣ ಸಂಪನ್ನಾ। ಸಾಲಗ್ರಾಮಶಿಲಾಭವೇತ್ ॥

ಎಲೈ ಗರುಡನೇ, ಶೀತವಾತಾದಿಗಳಿಲ್ಲದಿರುವ ಈ ಪರ್ವತದ ಗರ್ಭದಲ್ಲಿ ಸರ್ವಲಕ್ಷಣಗಳಿಂದ ಕೂಡಿದ ಸಾಲಿಗ್ರಾಮಗಳು ಉತ್ಪತ್ತಿಯಾಗುವವು.

ಉತ್ಪತ್ತಿಸ್ತಚ್ಛಿಲಾಯಸ್ತು। ಪುಣ್ಯಭಾಗೇಷುವಿದ್ಯತೇ ॥
ಪಶ್ಚಾತ್ ಸಹಸ್ರವರ್ಷಾಣಾಂ। ಶಾಲಗ್ರಾಮಸ್ಯಚಕ್ರತಃ ॥

ಅವುಗಳ ಉತ್ಪತ್ತಿಯು ಕೆಲವು ಭಾಗಗಳಲ್ಲಿ ಮಾತ್ರ. ಆರು ಸಾವಿರ ವರುಷಗಳವರೆಗೆ ಶಿಲೆಯಲ್ಲಿ ಚಕ್ರಗಳು ನಿರ್ಮಾಣಗೊಳ್ಳುತ್ತಿರುವವು.

ವಜ್ರಕೀಟ ಇತಿಖ್ಯಾತೋ। ಜಂತುರ್ಭೂತ್ವಾಹರಿ ಸ್ವಯಮ್ ॥
ಹಿರಣ್ಯಯೋ ಮಹಾವೀರ್ಯೋ। ವಿದ್ಯುಲ್ಲೇಖನಿಭಃ ಪ್ರಭುಃ ॥

ವಜ್ರಕೀಟಗಳಲ್ಲಿ ವಿದ್ಯುತ್ತಿನ ಪ್ರಭೆ ಇರುವುದು. ಅದು ಬಂಗಾರದ ಬಣ್ಣದ್ದಾಗಿರುವುದು. ಹೆಚ್ಚು ಶಕ್ತಿಶಾಲಿಯಾದ ಸಾಲಗ್ರಾಮಗಳನ್ನು ಸ್ವತಃ ವಿಷ್ಣುವೇ ಈ ರೂಪದಿಂದ ನಿರ್ಮಿಸುವನೆಂಬ ನಂಬಿಕೆ. ಯಾವ ಸದ್ದು ಗದ್ದಲ್ಲವಿಲ್ಲದೆ ಚಕ್ರಾಂಕಿತಗಳ ನಿರ್ಮಾಣ ಕಾರ್ಯವು ಅಹೋರಾತ್ರಿ ನಡೆದಿರುವದು, ಅಂಥ ಸಾಲಗ್ರಾಮಗಳನ್ನು ನೋಡಿದ ಮಾತ್ರದಿಂದ ಸರ್ವಪಾಪಗಳು ಪರಿಹಾರವಾಗುತ್ತವೆ. ಅಷ್ಟೇ ಅಲ್ಲ. ಆ ಪ್ರವಾಹದ ಮೇಲೆ ಬೆಳೆದ ವೃಕ್ಷ ನೋಡಿದರೂ ಪುಣ್ಯ ಪ್ರಾಪ್ತಿಯಾಗುತ್ತದೆ. ಪೀಠಪದ್ಮಾದಿ ಬೇಧಗಳಿಂದ ಸಾಲಗ್ರಾಮದಲ್ಲಿ ಕಾಣಸಿಗುವ ಚಕ್ರಾಂಕಿತಗಳಿಂದ ವದನಗಳಲ್ಲಿ

ಅನೇಕ ತರಹದ ಪ್ರಬೇಧಗಳಿವೆ. ಅವುಗಳನ್ನು ಸಂಗ್ರಹಿಸಿಕೊಂಡು ಪೂಜಿಸಿ ಚತುರ್ವಿಧ ಪುರುಷಾರ್ಥ ಪಡೆಯಲು ಯತ್ನಿಸಬೇಕಾದುದು ಬಹು ಪುಣ್ಯದ ಕೆಲಸವೆನಿಸುವದು.

## *ಸಾಲಗ್ರಾಮದ ಲಕ್ಷಣಗಳು*

ಮೂರ್ತಯೋದ್ವಿವಿಧಾಜ್ಞೇಯಾ। ಜಲಜಾಸ್ಥಳಜಾಃ ಸ್ಮೃತಾಃ ||
ಜಲಸ್ಥಾಃ ಕೋಮಳಾಃ ಸ್ನಿಗ್ಧಾಃ। ಸ್ಥಲಸ್ಥಾಃ ಪರುಷಾಃ ಸ್ಮೃತಾಃ ||

ಪವಿತ್ರ ತೀರ್ಥದಲ್ಲಿ ಸಾಲಗ್ರಾಮಗಳು ಹುಟ್ಟಿಕೊಳ್ಳುವವು. ಅದೇ ರೀತಿಯಲ್ಲಿ ಭೂಮಿಯ ಮೇಲೆ ಕಾಣಿಸಿಕೊಂಡ ಸಾಲಗ್ರಾಮಗಳೂ ಉಂಟು. ಹೀಗೆ ಎರಡು ಬಗೆಯ ವಿಧಾನಗಳುಂಟು. ಜಲಸ್ಪರ್ಷದಿಂದಾಗಿ ಬಹು ನುಣುಪಾಗಿ ಕೋಮಲವಾಗಿರುವವು. ಸ್ಥಲಜಗಳು ಪುರುಷಗಳಾಗಿ ಸ್ಪರ್ಶ ಮಾಡಿದಲ್ಲಿ ಸ್ವಲ್ಪ ಬಿರುಸಾಗಿ ತೋರುವಂತಹ ಶಿಲೆಗಳು ಕಠಿಣ ಮೂರ್ತಿಗಳೆನಿಸುವವು. ಈ ಲಕ್ಷಣಗಳು ಸಾಮಾನ್ಯ ಲಕ್ಷಣಗಳಾಗಿರುವವು. ಇದರಲ್ಲಿ ಅನೇಕ ವಿಶೇಷ ಲಕ್ಷಣಗಳೂ ಇರುವವು. ಅಲ್ಲದೆ ವರ್ಣಭೇದಗಳನ್ನೂ ಸಹ ನಾವು ಕಾಣಬಹುದು. (1) ಶ್ಯಾಮವರ್ಣ, (2) ಕೃಷ್ಣವರ್ಣ, (3) ಶ್ವೇತವರ್ಣ, (4) ಬಹುವರ್ಣ, (5) ಕಪಿಲವರ್ಣ ಎಂಬ ಪ್ರಭೇದಗಳನ್ನು ಕಾಣಬಹುದು.

## *ಶ್ಯಾಮವರ್ಣ :*

ಪುಷ್ಟಿದಾವೃದ್ಧಿದಾಶ್ಯಾಮಾ।ಸದಾಪಶುಸಮೃದ್ಧಿದಾ ||
ಸರ್ವಸಿದ್ಧಿಪ್ರದಾಚೈವ। ರಾಜ್ಯದಾ ಸರ್ವಕಾಮದಾ ||

ಶ್ಯಾಮವರ್ಣದ ಸಾಲಗ್ರಾಮವನ್ನು ಪೂಜೆ ಮಾಡಿದರೆ ಸದಾ ಕಾಲ ದೇಹಪುಷ್ಟಿ ಹಾಗೂ ಧನಕನಕಾದಿಗಳು ಸಮೃದ್ಧವಾಗಿ ದೊರೆತು, ಗೋಸಂಪತ್ತಿನೊಂದಿಗೆ ಸಕಲ ಇಷ್ಟಾರ್ಥ ಸಿದ್ಧಿಯನ್ನು, ರಾಜ್ಯವನ್ನು

ಹೊಂದಬಹುದು. ಇದು ಸಕಲ ಇಷ್ಟಾರ್ಥಗಳನ್ನೂ ಕೊಡುವಂತಹದಾಗಿರುವದು.

*ಕೃಷ್ಣ ವರ್ಣ :*

> ಕೃಷ್ಣಾಕೀರ್ತಿಪ್ರದಾನಿತ್ಯಂ । ಸರ್ವಸಂಪತ್ಕರೀತಥಾ ॥
> ರಕ್ತಾರಾಜ್ಯಕರೀಜ್ಞೇಯಾ । ಪೀತಾಧನಕರೀತಥಾ ॥

ಕಪ್ಪಾದ ಸಾಲಗ್ರಾಮುಗಳನ್ನು ಪ್ರತಿದಿನವೂ ಪೂಜಿಸುವುದರಿಂದ ಉಪಾಸಕನ ಕೀರ್ತಿಯು ದಿನದಿಂದ ದಿನಕ್ಕೆ ಅಭಿವೃದ್ಧಿಯಾಗುತ್ತ ಹೋಗುವದು. ಸಕಲ ವಿಧವಾದ ಸಂಪತ್ತು ಲಭಿಸುವದು. ಇದರಲ್ಲಿ ಕೆಂಪು ಸಾಲಗ್ರಾಮವು ರಾಜ್ಯವಿಸ್ತಾರವನ್ನೂ, ಸ್ವರ್ಣವರ್ಣದ ಸಾಲಗ್ರಾಮವು ಧನಧಾನ್ಯಾದಿಗಳನ್ನೂ ಕೊಡುವದು.

*ಶ್ವೇತವರ್ಣ :*

> ಶ್ವೇತವರ್ಣಾ ಮೋಕ್ಷದಾಸ್ಯಾ । ದ್ವಿದ್ಯಾಮೇವ ಪ್ರಯಚ್ಛತಿ ॥
> ಲೋಕಪೂಜ್ಯ ತ್ವದಾಚ್ಛೈವ । ಚಂದ್ರವರ್ಣಾಸುಖಾವಹಾ ॥

ಬಿಳಿಯ ವರ್ಣದ ಸಾಲಗ್ರಾಮುವು ಮೋಕ್ಷವನ್ನೀಯುವುದಲ್ಲದೆ, ವಿದ್ಯೆಯನ್ನೂ ಸಹ ದಯಪಾಲಿಸುವದು. ಸಾಧಕನನ್ನು ಅದು ಲೋಕಪೂಜ್ಯನನ್ನಾಗಿ ಮಾಡುವದು. ಆದರಲ್ಲಿಯೂ ವಿಶೇಷವೆಂದರೆ ಚಂದ್ರನಂತೆ ಶುಭ್ರವಾಗಿರುವ ಸಾಲಿಗ್ರಾಮ ಶಿಲಾಮೂರ್ತಿಯು ಸದಾ ಸರ್ವದಾ ಸುಖವನ್ನಿಯುವಂತಹದು.

*ಬಹುವರ್ಣ :*

> ಬಹುವರ್ಣಾ ಶ್ರೀಕರಿಸ್ಯಾತ್ । ದ್ವಿದ್ಯಾಸಂಪತ್ಪ್ರದಾಯಿನೀ ॥
> ಧೂಮ್ರಾಕಲಹದಾನಿತ್ಯ । ಮತಿರಕ್ತಾಚರೋಗದಾ ॥

ಬಹುವರ್ಣಗಳಿಂದ ಕೂಡಿದ ಸಾಲಿಗ್ರಾಮವು ಶ್ರೇಯಸ್ಸು, ವಿದ್ಯೆ, ಸಂಪತ್ತು ಗಳನ್ನೀಯುವದು. ಅದೇ ರೀತಿ ಒಂದು ವೇಳೆ ಸಾಲಿಗ್ರಾಮವು ಬೂದು ಬಣ್ಣದ್ದಾಗಿದ್ದಲ್ಲಿ ಆ ಮನೆಯಲ್ಲಿ ಯಾವಾಗಲೂ ರೋಗರುಜಿನಾದಿಗಳ ಕಾಟವಿರುವದು.

*ಅತಿಕೃಷ್ಣ :*

> ಅತಿಕೃಷ್ಣಾ ಮೃತ್ಯುದಾಸಾ। ದ್ವಿವರ್ಣಾ ಕುಲನಾಶಿನೀ॥
> ಸಂದಿಗ್ಧ ವರ್ಣಾಹಂತಿಸ್ಮ ಇತಿ ಜ್ಞಾತ್ವಾ ವಿವರ್ಜಯೇತ್॥

ಅತ್ಯಂತ ಕಪ್ಪಾಗಿರುವ ಸಾಲಿಗ್ರಾಮವು ಮರಣವನ್ನೇ ತರುತ್ತದೆ. ಇತರ ಯಾವ ಬಣ್ಣಗಳಿರದೆ ಶುದ್ಧವಾದ ಎರಡೇ ಎರಡು ಬಣ್ಣಗಳಿದ್ದರೆ ಅಂತಹ ಸಾಲಿಗ್ರಾಮವನ್ನು ಪೂಜೆ ಮಾಡುವುದರಿಂದ ಕುಲವೇ ನಾಶವಾಗಿ ಹೋಗುತ್ತದೆ. ಇನ್ನು ಅವುಗಳಲ್ಲಿಯ ಮೂರ್ತಿ ಲಕ್ಷಣಗಳ ವಿಚಾರ ಕುರಿತು ಹೇಳುವೆ.

*ಶ್ರೀಮೂರ್ತಿ ಲಕ್ಷಣ :*

> ಅಥವಕ್ಷ್ಯೇ ವಿಶೇಷಣ। ಶ್ರೀಮೂರ್ತೇರ್ಗಣ್ಯ ಲಕ್ಷಣಂ॥
> ಸ್ನಿಗ್ಧಂಸೂಕ್ಷ್ಮಪ್ರದಂ ನಿತ್ಯಂ। ಸೂಕ್ಷ್ಮಂದ್ರವ್ಯಫಲಪ್ರದಮ್॥

ಲಕ್ಷ್ಮೀ ಸಹಿತ ಸಾಲಿಗ್ರಾಮ ಮೂರ್ತಿಗಳ ಲಕ್ಷಣಗಳನ್ನು ತಮಗೆ ವಿವರಿಸುವೆ. ಸ್ಪರ್ಶ ಮಾಡಿದಲ್ಲಿ ಬಹು ನುಣುಪಾಗಿರುವಂತಹ ಸಾಲಿಗ್ರಾಮಗಳನ್ನು ಪೂಜಿಸುವುದರಿಂದ ಎಂಥ ಸೂಕ್ಷ್ಮ ವಿಷಯಗಳಲ್ಲಿಯೂ ಜಯ ಪ್ರಾಪ್ತಿಯಾಗುವದು. ಅದೇ ಸಾಲಿಗ್ರಾಮವು ಕೋಮಲವಾಗಿದ್ದಲ್ಲಿ ದ್ರವ್ಯವನ್ನು ಕೊಡುತ್ತದೆ.

> ಸಂತೋಷದಂ ಶೀತಲಾಂಗಂ। ವೃತ್ತಂಸಿದ್ಧಿಪ್ರದಾಯಕಮ್॥
> ಸರ್ವಸಿದ್ಧಿಪ್ರದಂಪ್ರಾಹುಃ। ಶೀತಂವಿನ್ಯಸ್ತಮಸ್ತಕಮ್॥

ಯಾವ ಸಾಲಿಗ್ರಾಮದ ಮೂರ್ತಿಯನ್ನು ಅಂಗೈಯಲ್ಲಿರಿಸಿಕೊಂಡಾಗ ತಣ್ಣಗೆನಿಸುವುದೋ ಅಂಥ ಸಾಲಿಗ್ರಾಮದ ಪೂಜೆಯಿಂದ ಸಂತೋಷ ವುಂಟಾಗುವದು. ಶುದ್ಧ ಉರುಟು ಸಾಲಿಗ್ರಾಮವು ಎಲ್ಲ ಅಪೇಕ್ಷೆಗಳನ್ನು ಕೊಡುವಂತಹವು. ಯಾವ ಸಾಲಿಗ್ರಾಮವು ಶಿರೋಧಾರಣೆ ಮಾಡಿದಾಗ ತಂಪೆನಿಸುವದೋ ಅಂಥ ಸಾಲಿಗ್ರಾಮವು ಅರ್ಚಕನ ಎಲ್ಲ ಕೆಲಸ ಕಾರ್ಯಗಳಲ್ಲಿ ಜಯವನ್ನು ತರುವದು.

ವಾಮಚಕ್ರಂ ಮಧ್ಯಚಕ್ರಂ। ಪುತ್ರಪೌತ್ರಾಭಿವೃದ್ಧಿದಂ॥
ಕೀರ್ತಿಪ್ರದಂ ಚಾರು ಚಕ್ರಂ। ಮಾನದಂ ಸ್ಯಾದಾಸ್ಯಗಹ್ವರಂ॥

ಸಾಲಿಗ್ರಾಮದ ಎಡಭಾಗದಲ್ಲಾಗಲೀ ಅಥವಾ ಮಧ್ಯಭಾಗದಲ್ಲಾಗಲೀ ಚಕ್ರಗಳಿದ್ದರೆ ಮಕ್ಕಳು ಮೊಮ್ಮಕ್ಕಳಾದಿಯಾಗಿ ಸಂತಾನಾಭಿವೃದ್ಧಿಯಾಗುವದು. ಒಂದು ವೇಳೆ ನಾಲ್ಕು ಚಕ್ರಗಳಿದ್ದಲ್ಲಿ ಮನಸ್ಸಿಗೆ ಪ್ರಿಯವೆನಿಸಬಹುದಾದ ಕೀರ್ತಿಯನ್ನು ಕೊಡುವದು. ಸಾಲಿಗ್ರಾಮದ ಒಳಭಾಗದಲ್ಲಿ ಅಂದವಾದ ಚಕ್ರಗಳಿದ್ದರೆ ಅಂಥ ಸಾಲಿಗ್ರಾಮ ಪೂಜೆಯಿಂದ ಸಕಲ ಮರ್ಯಾದೆಗಳು ಲಭಿಸುವವು.

ಪದ್ಮಾದಿಯುಕ್ತಂ ಸೌಭಾಗ್ಯಂ। ಧಾನ್ಯಧೇನುಧನಪ್ರದಂ॥
ಶ್ರೀವತ್ಸಸ್ವಸ್ತಿಕಾಢ್ಯಂಚ। ರಾಜ್ಯಶ್ರೀಪುತ್ರಭೋಗದಮ್॥

ಕಮಲದ ಚಿಹ್ನೆಗಳನ್ನು ಹೊಂದಿದ ಸಾಲಿಗ್ರಾಮವು ಧನಧಾನ್ಯಗಳೊಂದಿಗೆ ಸಕಲ ಸೌಭಾಗ್ಯವನ್ನೂ ಕೊಡುವದು. ಶ್ರೀವತ್ಸಮಣಿಯ ಸ್ವಸ್ತಿಕದ ಚಿಹ್ನೆಗಳಿದ್ದುದಾದರೆ ಪುತ್ರಸಂತಾನ ಹಾಗೂ ರಾಜಶ್ರೀ ಲಭಿಸುವದು.

ಶಂಖಚಕ್ರಗದೋಪೇತಂ। ಧ್ವಜವಜ್ರಾಂಕುಶಾನ್ವಿತಮ್।
ಮುಸಲಾದಿ ಧನುರ್ಬಾಣ। ತೂಣೀರಸಮಲಂಕೃತಮ್॥

ಸರ್ವಶತ್ರುಃ ಕ್ಷಯಕರಂ। ಜಯಲಕ್ಷ್ಮೀಪ್ರದಂ ಶುಭಮ್।
ಯುವರೇಖಾಯುತಾಮೂರ್ತಿ। ಧನ-ಧಾನ್ಯಸಮೃದ್ಧಿದಾ॥

ಶಂಖಚಕ್ರ, ಗದಾ, ಪದ್ಮ, ಧ್ವಜಾಯುಧ, ಅಂಕುಶ ಮುಸಲಗಳಿಂದ ಯುಕ್ತವಾದಸಾಲಿಗ್ರಾಮವು ಜಯಲಕ್ಷ್ಮಿಯನ್ನೊದಗಿಸುವದೆಂದು ತಿಳಿಯಬೇಕು. ಮೇಲೆ ರೇಖೆಗಳಿರುವ ಸಾಲಿಗ್ರಾಮವು ಧನಧಾನ್ಯಗಳ ಸಮೃದ್ಧಿಯನ್ನುಂಟು ಮಾಡುವದು.

ಛತ್ರ ಚಾಮರ ರೇಖಾಢ್ಯಾ। ಸರ್ವಪೂಜ್ಯತ್ವದಾಯಿಕಾ॥
ಜಿಹ್ವಾಮಲಕ ತುಲ್ಯಾಯಾ। ಸೂಕ್ಷ್ಮ ಚಕ್ರದ್ವಯಾನ್ವಿತಾ॥

ತಸ್ಯಾಮೇದ ಸದಾಕಾಲಂ। ಶ್ರಿಯಾಸಹಹರಿಃ ಸ್ಥಿತಃ।
ಯಥಾಯಥಾ ಶಿಲಾಸೂಕ್ಷ್ಮಾ। ಫಲಾದಿತ್ಯಂ ತಥಾತಥಾ॥

ಸಾಲಿಗ್ರಾಮದ ಬಾಯಿಯ ಒಳಭಾಗದಲ್ಲಿ ನಾಲಿಗೆಯ ಆಕಾರ ನೆಲ್ಲಿಕಾಯಿಯಂತಹ ಸೂಕ್ಷ್ಮವಾದ ಎರಡು ಚಕ್ರಗಳಿದ್ದಲ್ಲಿ ಅಂಥ ಮನೆಯಲ್ಲಿ ಯಾವಾಗಲೂ ಲಕ್ಷ್ಮೀನಾರಾಯಣರ ಸನ್ನಿಧಾನವಿರುವದು. ಸಾಲಿಗ್ರಾಮಗಳು ಎಷ್ಟು ಚಿಕ್ಕದಾಗಿರುತ್ತವೆಯೋ ಅವುಗಳು ಅಷ್ಟು ಹೆಚ್ಚಿನ ಫಲವನ್ನೀಯುವವು.

ಶ್ರೀಫಲಾದಧಿಕಂಸ್ಥೂಲಂ। ಸೂಕ್ಷ್ಮಂಜಾಂಬುಫಲಾದಣು॥
ಅತಿಹ್ರಸ್ವಮಪೂಜಾರ್ಹ। ಮತಿಸ್ಥೂಲಂಧನಾಪಹಮ್॥

ಸಾಲಿಗ್ರಾಮಗಳು ಬಿಲ್ವ ವೃಕ್ಷದ ಕಾಯಿಗಳಿಗಿಂತ ದೊಡ್ಡದಾಗಿರಬಾರದು. ಇನ್ನು ಚಿಕ್ಕದು ಎಂದರೆ ನೇರಲೆ ಹಣ್ಣಿಗಿಂತ ಚಿಕ್ಕದಾಗಿರಬಾರದು. ಅತೀ ಚಿಕ್ಕದೂ ಯೋಗ್ಯವಲ್ಲ. ಅತೀ ದೊಡ್ಡದೂ ಯೋಗ್ಯವಲ್ಲ ಎಂಬುದೇ ಇದರ ತಾತ್ಪರ್ಯವಾಗಿರುವದು.

ಕ್ಷೀರೇವಾತಂಡುಲೇವಾಪಿ। ಸಾಲಗ್ರಾಮಂನಿವೇಶಯೇತ್ ॥
ದೃಷ್ಟ್ವಾಧಿಕ್ಯಂ ತಯೋಸ್ತತ್ರ। ಗೃಹ್ಣೀಯಾನ್ಮತಿಮಾನ್ನರಃ ॥

ಹಾಲಿನಲ್ಲಾಗಲೀ ಇಲ್ಲವೇ ಅಕ್ಕಿಯಲ್ಲಾಗಲೀ ಸಾಲಿಗ್ರಾಮವನ್ನಿಟ್ಟು ಮರುದಿನ ಆ ಪದಾರ್ಥಗಳಲ್ಲಿ ಅಭಿವೃದ್ಧಿಯಾದುದನ್ನು ಕಂಡಲ್ಲಿ ಅಂಥ ಸಾಲಿಗ್ರಾಮಗಳನ್ನು ಬುದ್ಧಿವಂತರಾದವರು ಕೂಡಿಡಬೇಕು.

ವಿರೂಪವಾದ ಚಕ್ರಗಳಿರುವ ಸಾಲಿಗ್ರಾಮಗಳು ಕುಲಹಾನಿಯನ್ನೂ, ಎರಡು ಭಯಕರಂವೆನಿಸಬಹುದಾದ ಚಕ್ರಗಳಿರುವ ಸಾಲಿಗ್ರಾಮಗಳು ಕೆಟ್ಟದ್ದನ್ನೂ ಇಲ್ಲವೇ ವಿರುದ್ಧ ದಿಕ್ಕಿನಲ್ಲಿ ಚಕ್ರದ ಸುಳಿಗಳಿದ್ದಲ್ಲಿ ಅಂಥವುಗಳಿಂದ ದುಃಖಪ್ರಾಪ್ತಿಯಾಗುವದು. ವಿಕಾರ ಮುಖವುಳ್ಳ ಸಾಲಿಗ್ರಾಮಗಳು ಕ್ಷಯ ವನ್ನೂ ಮೇಲ್ಮುಖವಾಗಿದ್ದಲ್ಲಿ ಭಿಕ್ಷಾಟನೆಯನ್ನೂ, ಕೆಳಮುಖವು ಓರೆಯಾಗಿ ದ್ದರೆ ಕ್ಷಯರೋಗವನ್ನು ತರುತ್ತವೆ. ಇನ್ನು ಶಿರೋಭಾಗವು ಓರೆಕೋರೆ ಯಿಂದಿದ್ದಲ್ಲಿ ಅಂಥವುಗಳನ್ನು ಪೂಜಿಸಿದರೆ ಮಕ್ಕಳಾಗುವದಿಲ್ಲ. ಚಕ್ರಗಳು ಹೂತ ರಂಥದಂತಿದ್ದರೆ ಸ್ನೇಹಿತರಿಲ್ಲದಂತೆ ಮಾಡುವದು. ಚಕ್ರಾಂಕಿತಗಳಿಲ್ಲದ ಸಾಲಿಗ್ರಾಮಗಳು ಪೂಜಿಸುವವನನ್ನು ನಿರ್ಗತಿಕನನ್ನಾಗಿ ಮಾಡುತ್ತವೆ. ತುಂಡಾದ ಚಕ್ರವಿದ್ದಲ್ಲಿ ಕಳ್ಳತನ ಮಾಡಿಸಿ ಪಾಪಿಗಳನ್ನಾಗಿ ಮಾಡುತ್ತದೆ.

ವಿಪದಂ ಚಕ್ರ ವಿಷಮಂ। ಬಹುಚಕ್ರಂ ಬಲಕ್ಷಯಮ್ ॥
ಸ್ಫುಟಿತಂ ಪುತ್ರನಾಶಾಯ। ಭಗ್ನೋಷ್ಠಂ ಭುಕ್ತಿನಾಶನಮ್ ॥

ಆಕಾರ ಸರಿಯಿಲ್ಲದ ಸಾಲಿಗ್ರಾಮವಾದರೆ ವಿಪತ್ತನ್ನೂ, ಹೆಚ್ಚು ಚಕ್ರಗಳಿದ್ದರೆ ಸಂತಾನ ನಾಶವನ್ನೂ, ಮುಖದ ಬಳಿ ತುಂಡಾಗಿದ್ದರೆ ದುರ್ದೆಶೆಯನ್ನೂ ತರುತ್ತದೆ.

ಸಾಲಿಗ್ರಾಮದ ಮೇಲ್ಪದಿಯು ತಗ್ಗಾಗಿದ್ದರೆ ಅಪಸ್ಮಾರ, ದೊಡ್ಡದಾಗಿದ್ದರೆ ಧನಹಾನಿ, ಮೂರು ಮೂಲೆಗಳಿದ್ದಲ್ಲಿ ಬಂಧುಗಳಿಲ್ಲ

ದವನನ್ನಾಗಿ ಮಾಡುವದು. ಬಹುರೇಖೆಗಳಿದ್ದಲ್ಲಿ ಕ್ರೂರಿಯನ್ನಾಗಿ ಮಾಡುವದು. ಸಾಲಿಗ್ರಾಮದ ನಡುವಿನ ದಪ್ಪವು ಅದರ ವೃತ್ತದ ಎಂಟನೆಯ ಒಂದು ಪಾಲಿನದಾಗಿದ್ದರೆ ಉತ್ತಮವೆನಿಸುವದು. ಎರಡು ಪಾಲಿನದಷ್ಟಿದ್ದರೆ ಮಧ್ಯಮ, ಮೂರು ಪಾಲಿನದಷ್ಟಿದ್ದರೆ ಅಧಮವುವೆಂದೆನಿಸುವದು. ಇದರಲ್ಲಿ ಮೂರನೆಯದನ್ನು ಬಿಡುವುದೇ ವಿಹಿತವೆನಿಸುವದು. ಹೀಗೆ ಸಾಲಿಗ್ರಾಮಗಳ ಮೂರ್ತಿಲಕ್ಷಣಗಳನ್ನು ಇಲ್ಲಿಯವರೆಗೆ ತಿಳಿದಷ್ಟು ವಿವರಿಸಲಾಗಿರುವದು.

*ಮೂರ್ತಿಗಳ ವರ್ಣ ಲಕ್ಷಣಗಳು :*

"ಕಪಿಲಂ ನಾರಸಿಂಹಂತು : ವಾಮನಂಸ್ಮ್ಯತಸೀನಿಭಮ್"

ಅಂದರೆ ಕಂದು ಬಣ್ಣದ ಸಾಲಿಗ್ರಾಮವು ನರಸಿಂಹಮೂರ್ತಿಯಾಗಿದೆ. ಅತನೀ (ಜೋಗಚಿ) ಅಥವಾ ಅಗಸೀ ಹೂವಿನ ವರ್ಣದ ಸಾಲಿಗ್ರಾಮವು ವಾಮನ ಮೂರ್ತಿಯ ಸಾಲಿಗ್ರಾಮವಾಗಿದೆ.

ವಾಸುದೇವಂ ಸಿತಂಜ್ಞೇಯಂ। ಶಕ್ತಂ ಸಂಕರ್ಷಣಂ ಸ್ಮೃತಮ್ ॥
ದಾಮೋದರಂತುನೀಲಾಭ। ಮನಿರುದ್ಧಂತಥೈವಚ ॥

ಸಕ್ಕರೆಯಂತೆ ಬಿಳಿ ವರ್ಣದ ಸಾಲಿಗ್ರಾಮವು ಹೆಚ್ಚಿನ ಶಕ್ತಿಯಿಂದ ಯುಕ್ತವಾದ ವಾಸುದೇವ ಸಂಕರ್ಷಣಮೂರ್ತಿ ಎಂದೆನಿಸಿಕೊಳ್ಳುವದು. ನೀಲವರ್ಣದ ಸಾಲಿಗ್ರಾಮವು ದಾಮೋದರ ಮೂರ್ತಿ ಎಂದೆನಿಸುವದು.

ಶ್ಯಾಮಂ ನಾರಾಯಣಂ ಪ್ರೋಕ್ತಂ ಕೃಷ್ಣವರ್ಣಂತುವೈಷ್ಣವಂ ॥
ಬಹುವರ್ಣಮನಂತಂಚ। ಶ್ರೀಧರಂಪೀತಮುಚ್ಯತೇ ॥

ಆಕಾಶ ಅಥವಾ ಮೋಡವರ್ಣದಿಂದ ಕೂಡಿದ ಸಾಲಿಗ್ರಾಮವು ನಾರಾಯಣಮೂರ್ತಿ ಎಂದೆನಿಸುವದು. ಶುದ್ಧ ಕಪ್ಪು ವರ್ಣದ್ದಾಗಿದ್ದರೆ ವೈಷ್ಣವಮೂರ್ತಿ, ಹೆಚ್ಚು ಬಣ್ಣಗಳಿಂದ ಕೂಡಿದ್ದರೆ ಅದು ಅನಂತಮೂರ್ತಿ, ಅರಿಶಿಣ ಬಣ್ಣದ್ದಾಗಿದ್ದರೆ ಅದು ಶ್ರೀಧರಮೂರ್ತಿ ಎಂದು ತಿಳಿಯಬೇಕು.

*ಚಕ್ರ ಲಕ್ಷಣಗಳು :*

> ವಾಸುದೇವೋಜಗದ್ಯೋನಿ। ಕೃಷ್ಣಪೀತಾಂಬರೋ ವ್ಯಯಃ॥
> ಸೀರಪಾಣಿಸಮೇತಾಃ ಷಟ್। ದ್ವಾರಚಕ್ರಾ ಪ್ರತಿಕೀರ್ತಿತಾಃ॥

ವಾಸುದೇವಮೂರ್ತಿ, ಬ್ರಹ್ಮಮೂರ್ತಿ, ಕೃಷ್ಣಪೀತಾಂಬರಮೂರ್ತಿ, ಅನಂತ ಬಲರಾಮಮೂರ್ತಿ ಈ ಸಾಲಿಗ್ರಾಮಗಳಿಗೆಲ್ಲ ಆರು ಚಕ್ರಗಳಿರುವವು. ಆರೂ ದ್ವಾರಗಳಲ್ಲಿ ಚಕ್ರಗಳಿದ್ದರೆ, ಕಪ್ಪುವರ್ಣದ ಪಟ್ಟಿಯನ್ನು ಹೊಂದಿದ್ದರೆ ಅದನ್ನು ಜಗದೋದ್ಧಾರನಾದ ವಾಸುದೇವನ ಮೂರ್ತಿ ಎಂದು ತಿಳಿಯಬೇಕು.

> ಲಕ್ಷ್ಮೀನೃಸಿಂಹ ವಿಷ್ಣುಶ್ಚ। ನಾರಸಿಂಹಶ್ಚಭೀತಿದಃ॥
> ಬಲರಾಮೋಭೂವರಾಹಃ। ಸುಯಜ್ಞೋವಾಮಚಕ್ರಿಣಃ॥

ಎಡಬದಿಯಲ್ಲಿ ಚಕ್ರವಿದ್ದರೆ ಅದನ್ನು ಲಕ್ಷ್ಮೀನೃಸಿಂಹ ಸಾಲಿಗ್ರಾಮವೆಂದು ತಿಳಿಯಬೇಕು. ವರಾಹಮೂರ್ತಿ, ಯಜ್ಞಮೂರ್ತಿ ಈ ಸಾಲಿಗ್ರಾಮಗಳು ಭಯ ಹುಟ್ಟಿಸುವಂತಹವು.

> ಅನಿರುದ್ಧೋಹರಿಃ ಕೃಷ್ಣೋ। ಜಾಮದಗ್ನಿಸ್ತಥೈವಚ॥
> ವಾಮೇವಾದಕ್ಷಿಣೇವಾಪಿ। ಪಾರ್ಶ್ವಚಕ್ರಾಃ ಪ್ರಕೀರ್ತಿತಾ॥

ಎಡಭಾಗದಲ್ಲಾಗಲೀ ಅಥವಾ ಬಲಭಾಗದಲ್ಲಾಗಲೀ ಚಕ್ರವಿದ್ದಲ್ಲಿ ಅದನ್ನು ಅನಿರುದ್ಧ ಅಥವಾ ಹರಿ ಕೃಷ್ಣ ಇಲ್ಲವೇ ಜಮದಗ್ನಿ ಸಾಲಿಗ್ರಾಮವೆಂದು ತಿಳಿಯಬೇಕು. ಒಂದುವೇಳೆ ಶುದ್ಧವಾದ ಸಾಲಿಗ್ರಾಮ ಶಿಲಾ ಕಲ್ಲು ಅದಲ್ಲಿ ಅದರಲ್ಲಿ ಒಡಮೂಡಿದ ಚಕ್ರವು ಓರೆಕೋರೆ ಯಾಗಿದ್ದರೂ ಸಹ ಅದನ್ನು ಉತ್ತಮ ಸಾಲಿಗ್ರಾಮವೆಂದು ತಿಳಿಯಬೇಕು. ಈ ಸಾಲಗ್ರಾಮವೂ ಸಹ ಮೇಲೆ ಹೇಳಿದಂತೆ ಸಂಪತ್ತನ್ನೀಯುವದಾಗಿರುವದು. ಇನ್ನು ಮುಂದೆ ಮತ್ಸ ಸಾಲಿಗ್ರಾಮವನ್ನು ಕುರಿತು ವಿಚಾರ ಮಾಡುವ.

ಮತ್ಸ್ಯಸ್ತು ಷಡ್ವಿಧೋಜ್ಞೇಯಃ ಕೂರ್ಮಃ ಪಂಚವಿಧಃಸ್ಮೃತಃ ॥
ವರಾಹಃ ಷಡ್ವಿಧೋನಾರಸಿಂಹೋಷ್ಟಾದಶಭೇದವಾನ್ ॥

ಮತ್ಸ್ಯ ಸಾಲಿಗ್ರಾಮಗಳಲ್ಲಿ ಆರು ವಿಧಗಳಿರುವವು. ಕೂರ್ಮದಲ್ಲಿ ಐದು ವಿಧ. ವರಾಹದಲ್ಲಿ ಆರು ವಿಧ. ನರಸಿಂಹಮೂರ್ತಿಯಲ್ಲಿ ಹದಿನೆಂಟು ವಿಧ ಸಾಲಿಗ್ರಾಮಗಳಿರುವದು.

ವಾಮನಃ ಪಂಚಭೇದಃಸ್ಯಾತ್ । ಜಾಮದಗ್ನ್ಯೋದ್ವಿಧಾಮತಃ ॥
ರಾಮೋವಿಂತಿಶಿದಾ ಭಿನ್ನಃ। ಬಲರಾಮಸ್ತ್ರಿಧಾಮತಃ ॥

ವಾಮನಮೂರ್ತಿಯಲ್ಲಿ ಐದು ವಿಧ. ಜಮದಗ್ನಿಯಲ್ಲಿ ಎರಡು ವಿಧ. ರಾಮಮೂರ್ತಿಯಲ್ಲಿ ಇಪ್ಪತ್ತು ವಿಧ. ಬಲರಾಮಮೂರ್ತಿಯಲ್ಲಿ ಮೂರು ವಿಧ ಸಾಲಿಗ್ರಾಮಗಳಿರುವುವು.

ತ್ರಯೋದಶ ಪ್ರಭೇದಃಸ್ಯಾತ್ । ಕೃಷ್ಣಃ ಕಲ್ಕಿರ್ದ್ವಿದಾಸ್ಮೃತಃ ॥
ನಾನಾವರ್ಣಸಮೋಪೇತಾಃ ಕಾಂಸ್ಯವರ್ಣಯುತಾಪಿವಾ ॥

ಕೃಷ್ಣಮೂರ್ತಿ ಹದಿಮೂರು ವಿಧ. ಕಲ್ಕಿ ಎರಡು ವಿಧ. ಈ ಸಾಲಿಗ್ರಾಮಗಳು ನಾನಾ ವರ್ಣಗಳಿಂದ ಕೂಡಿದುದಾಗಿವೆ. ಅಥವಾ ಕಂಚಿನ ವರ್ಣದಂತೆಯೂ ತೋರಬಹುದು.

*ಮತ್ಸ್ಯ ಸಾಲಿಗ್ರಾಮ ಲಕ್ಷಣ :*

ದೀರ್ಘಾಕಾರಯುತಾಸ್ನಿಗ್ಧಾ । ದ್ವಾರಮಧ್ಯೇದ್ವಿಚಕ್ರಯುತ್ ॥
ಚಕ್ರಮೇಕಂ ಪುಚ್ಛಭಾಗೇ। ದಕ್ಷಿಣೇಚಶರಾಕೃತಿಃ ॥

ವಾಮೇಷ ದೃಶ್ಯತೇರೇಖಾ। ಮತ್ಸ್ಯಮೂರ್ತಿರಿತೀರಿತಾ ॥
ಮತ್ಸ್ಯಾಕೃತಿ ಸಮಾಕಾರಾ। ಮುಖಸಾದೃಶ್ಯಚಕ್ರಿ ಕಾಃ ॥

ಆಕಾರದಲ್ಲಿ ಉದ್ದವಾಗಿದ್ದು ಅದರ ಮಧ್ಯದಲ್ಲಿ ಎರಡು ಚಕ್ರಗಳೊಂದಿಗೆ



ಸಾಲಿಗ್ರಾಮ ಶಿಲೆಯಲ್ಲಿರುವ ಆದ್ಯರ ಕುಲದೇವನಾದ ಚನ್ನಕೇಶವ.






ಸಾಲಿಗ್ರಾಮದಲ್ಲಿ ಶ್ರೀನಿವಾಸ ಹಾಗೂ ಹಯಗ್ರೀವ,
ವಾಸುದೇವ ಮೊದಲಾದ ಸಾಲಿಗ್ರಾಮಗಳ ಮಾದರಿಗಳು

ಕೋಮಲವಾದ ಬಾಲದ ಆಕಾರ, ಬಾಯಿಯಲ್ಲಿ ಎರಡು ಚಕ್ರಗಳಿರಬೇಕು. ಎಡಬದಿಯಲ್ಲಿ ಒಂದು ರೇಖೆ ಕಾಣುತ್ತಿದ್ದಲ್ಲಿ ಅದನ್ನು ಮತ್ಸ್ಯಸಾಲಿಗ್ರಾಮವೆಂದು ಕರೆಯುವರು. ಇದಲ್ಲದೆ ಮತ್ಸ್ಯಮಣಿಯ ಬಿಂದುವಿನಲ್ಲಿ ವೊಸೆಯಂತೆ ನಾನಾವರ್ಣಗಳಿಂದ ಕೂಡಿಕೊಂಡಿದ್ದು ಉದ್ದವಾಗಿದ್ದು ಬಲಬದಿಯಲ್ಲಿ ಚೆನ್ನಾಗಿ ಕಾಣಿಸುವ ಚಕ್ರವಿದ್ದರೆ ಅದೂ ಸಹ ವುತ್ಸ್ಯ ಸಾಲಿಗ್ರಾವುವಾಗಿದ್ದು, ಈ ಸಾಲಿಗ್ರಾವುವು ಶುಭವನ್ನುಂಟುಮಾಡುವಂತಹದಾಗಿರುವದು. ಇದರಲ್ಲಿ ಇನ್ನೊಂದು ವಿಶೇಷವೆಂದರೆ ಸ್ವಲ್ಪ ಉದ್ಧವಾಗಿದ್ದು ಎಡಬದಿಯಲ್ಲಿ ಚಕ್ರವಿದ್ದಲ್ಲಿ ಆ ಸಾಲಿಗ್ರಾಮವಾದರೂ ಸಹ ಶುಭವನ್ನುಂಟು ಮಾಡುವುದು.

ದೀರ್ಘವಕ್ರಂ ಚಕ್ರಯುಗಂ ವಾಮೇ ಶ್ರೀವತ್ಸಲಾಂಛನಂ ||
ದೀರ್ಘಂದಕ್ಷಿಣತೋವಕ್ರಂ | ಚಕ್ರಂಪುಚ್ಛಸಮೀಪಗಂ ||

ಮುಖೆ ಚಕ್ರದ್ವಯ ಯುತಂ | ಪಾರ್ಶ್ವಚಕ್ರದ್ವಯಾನ್ವಿತಂ |
ಘೈಚ್ಛಚಕ್ರಯುತಂಮತ್ಸ್ಯಂ | ಯದ್ವಾಪಾರ್ಶದ್ವಯೇಂಕಿತಮ್ ||

ರಕ್ತನೀಲಂ ಮತ್ಸ್ಯಮೂರ್ತಿಂ | ರಾಜ್ಯಲಕ್ಷ್ಮೀ ಪ್ರದಾಯಕಂ |
ಬಿಂದುತ್ರಯ ಸಮಾಯುಕ್ತಂ | ಚಕ್ರಂ ಶಂಖಾದಿ ಲಾಂ ಶ್ಯತಮ್ ||

ದೀರ್ಘಂ ದಕ್ಷಿಣಪಾರ್ಶ್ವಾಸ್ಯಂ | ಚಕ್ರಂ ಪುಚ್ಛಸವಿಕಾಪಗಮ್ |
ಅತ್ಯಂತ ಲಕ್ಷಣೋಪೇತಂ | ಜಲಂ ಘೋಷಯತೀವಹತ್ ||

ಉದ್ದವಾಗಿರುವ ಮುಖ ಹಾಗೂ ಎರಡು ಚಕ್ರಗಳಿದ್ದು ಅದರ ಎಡಬದಿಯಲ್ಲಿಯೂ ಎರಡು ಚಕ್ರಗಳಿದ್ದರೆ ಅಥವಾ ಬೇರಿನ್ನಾವುದಾದರೂ ಗುರುತುಗಳಿದ್ದರೆ, ಬಾಲದಲ್ಲಿ ಒಂದು ಚಕ್ರವಿದ್ದರೆ ಅದನ್ನು ವುತ್ಸ್ಯ ಸಾಲಿಗ್ರಾಮವೆಂದು ಹೇಳುವರು. ಇನ್ನು ಮೂರು ಬಿಂದುಗಳಿಂದ ಕೂಡಿದ್ದು ಶಂಖ, ಚಕ್ರ ಇವೇ ಮೊದಲಾದ ಅಂಕಿತಗಳು ಕಂಡಲ್ಲಿ, ಬಣ್ಣದಲ್ಲಿ ಕೆಂಪು

ಅಥವಾ ನೀಲವು ಕಾಣುತ್ತಿದ್ದರೆ ಅಂಥ ಸಾಲಿಗ್ರಾಮವು ರಾಜಲಕ್ಷ್ಮಿಯನ್ನೊದಗಿಸಿಕೊಡುವದೆಂದು ಭಾವಿಸುವದು. ಇನ್ನು ಬಾಲದ ಬುಡದಲ್ಲಿ ಚಕ್ರವಿದ್ದು, ಹೆಚ್ಚು ಲಕ್ಷಣವುಳ್ಳದ್ದು, ಒಣಕಲು ಶರೀರದಂತಿದ್ದ ಸಾಲಿಗ್ರಾಮವನ್ನು ಸನ್ಯಾಸಿ ಹಾಗೂ ಬ್ರಹ್ಮಚಾರಿಗಳು ಮಾತ್ರ ಪೂಜೆ ಮಾಡಬೇಕು. ಇಲ್ಲಿಗೆ ಮತ್ಸ್ಯ ಸಾಲಿಗ್ರಾಮಗಳ ಲಕ್ಷಣಗಳನ್ನು ಹೇಳಿದ್ದಾಯಿತು. ಇನ್ನು ಮುಂದಿನದನ್ನು ವಿಚಾರ ಮಾಡೋಣ.

*ಕೂರ್ಮ ಸಾಲಿಗ್ರಾಮ :*

ಕೂರ್ಮಃಸ್ಯಾದುನ್ನತಃ ಪೃಷ್ಠಃ। ಶ್ವೇತಾಭೋಗೋಖುರಾನ್ವಿತಃ ||
ವಿಖ್ಯಾತೋದುರ್ಲಭಃ ಸರ್ವ। ಮನೋಹ್ಲಾದ ಫಲಪ್ರದಃ ||

ಬಿಂದುತ್ರಯಾನ್ವಿತಾಶಂಖ। ಯುಕ್ತಾಚಕ್ರಾಯುತಾಪಿವಾ ||

ದೀರ್ಘದಕ್ಷಿಣವಾಮಾಸ್ಯಾ। ಭೌನೋರ್ವಲಯ ಪಂಕ ಜೈಃ ||
ಹೃಷಿತಾ ಕೂರ್ಮಮೂರ್ತಿಸ್ಯಾ। ದ್ದುರ್ಲಭಾಸರ್ವಕಾಮದಾ ||

ವತ್ರಾಯತಾಕೂರ್ಮಮೂರ್ತಿಃ। ಕನಕಚ್ಛವಿಸಂಯುತಾ ||
ತ್ರಿಚಕ್ರಾ ಚಕ್ರಿಕಾವಾಪಿ। ಪೂಜತಾಸರ್ವಕಾಮದಾ ||

ಬಿಳೀ ಬಣ್ಣವಿದ್ದು ಸ್ವಲ್ಪ ಎತ್ತರವಾಗಿರಬೇಕು. ಮೂರು ಬಿಂದುಗಳಿರಬೇಕು. ಅಂಥ ಸಾಲಿಗ್ರಾಮವನ್ನು ಕೂರ್ಮ ಸಾಲಿಗ್ರಾಮವೆಂದು ಗುರುತಿಸುವರು. ಇದರಲ್ಲಿ ಬೆನ್ನು ಎತ್ತರವಾಗಿದ್ದು, ಮೂರು ಬಣ್ಣಗಳಿಂದ ಯುಕ್ತವಾಗಿದ್ದಲ್ಲಿ, ಶಂಖ ಚಕ್ರಗಳು ಕಾಣುತ್ತಿದ್ದಲ್ಲಿ ಆ ಸಾಲಿಗ್ರಾಮವು ಬಹು ಸಂತೋಷವನ್ನುಂಟು ಮಾಡುವಂತಹದಾಗಿರುವದು. ಇದು ಬಹು ಅಪರೂಪವಾಗಿ ದೊರೆಯುವದು. ಚಿನ್ನದಂತಹ ಬಣ್ಣ, ದೀರ್ಘವಾದ ವೃತ್ತಗಳು ಇರುವಂತಹ ಕೂರ್ಮ ಸಾಲಿಗ್ರಾಮ ಪೂಜೆ ಮಾಡುವದರಿಂದ ಇಷ್ಟಾರ್ಥಗಳೆಲ್ಲ ಸಿದ್ಧಿಸುವವು.

*ವರಾಹ ಸಾಲಿಗ್ರಾಮ :*

ಧೇಣಾರೂಪಾ ವರಾಹಾಖ್ಯಾ। ಚತುರ್ಲಾಂಛನ ಸಂಯುತಾ॥
ದದ್ಯಾತ್ಸಾಮೋಕ್ಷಸಂಸಿದ್ಧಿಂ। ಬ್ರಹ್ಮಚರ್ಯೇಣಪೂಜಿತಾ॥

ಸೂಚೀಮುಖಂ ಸೂಕ್ಷ್ಮ ಚಕ್ರ। ಮುನ್ನತಂಮಸ್ತಕೋಪರಿ॥
ತ್ರಿಬಿಂದುಭಿ : ಪರಿವೃತಂ। ವರಾಹಮಮೃತಪ್ರದಮ್॥

ಶಂಖ, ಚಕ್ರ, ಗದಾ, ಪದ್ಮ ಹೀಗೆ ನಾಲ್ಕು ಚಿಹ್ನೆಗಳಿಂದ ಕೂಡಿದ್ದು ನೊರೆಯ ರೂಪದಂತೆ ತೋರುವ ಸಾಲಿಗ್ರಾಮವನ್ನು ವರಾಹ ಸಾಲಿಗ್ರಾಮ ವೆಂದು ಹೇಳುವರು. ಬ್ರಹ್ಮಚಾರಿಗಳು, ಯತಿಗಳು ಈ ಸಾಲಿಗ್ರಾಮಗಳನ್ನು ಪೂಜಿಸುವದರಿಂದ ಮೋಕ್ಷಸಿದ್ಧಿಯನ್ನು ಹೊಂದುವರು. ಅದೇ ರೀತಿ ಮೊನಚಾದ ಮುಖವಿದ್ದು, ಸೂಕ್ಷ್ಮ ಚಕ್ರಗಳಿಂದಲೂ, ಮೂರು ಬಿಂದುಗಳಿಂದ ಯುಕ್ತವಾಗಿದ್ದು, ತಲೆಯು ಸ್ವಲ್ಪ ಎತ್ತರವಿದ್ದಂತಿದ್ದರೆ ಅಂತಹ ವರಾಹ ಸಾಲಿಗ್ರಾಮವು ಅಮೃತವನ್ನು ದಯಪಾಲಿಸುವದೆಂದು ಹೇಳಲಾಗಿದೆ.

*ಲಕ್ಷ್ಮೀವರಾಹ ಸಾಲಿಗ್ರಾಮ:*

ದೀರ್ಘದ್ವಾರಯುತಃ ಸ್ನಿಗ್ಧೋದ್ವಾರಮಧ್ಯೇದ್ವಿಚಕ್ರಯುತ್॥
ವನಮಾಲಾಯುತೇ ಲಕ್ಷ್ಮೀಃ। ವರಾಹಃ ಪರಿಕೀರ್ತಿತಃ॥

ದೀರ್ಘಾಸ್ಯಂ ಶ್ಯಾಮಳಾಕಾರಂ। ವಿಧೋರ್ವಲಯವೇಷ್ಟಿತಮ್॥
ದ್ವಾರ ದೇಶಲಸಚ್ಚಕ್ರಂ। ವರಾಹಂ ತದ್ವಿದುರ್ಬುಧಾ॥

ದ್ವಾರವು ಕೋಮಲವಾಗಿದ್ದು, ಆ ದ್ವಾರ ಮಧ್ಯದಲ್ಲಿ ಎರಡು ಚಕ್ರಗಳಿದ್ದಲ್ಲಿ ಆ ಸಾಲಿಗ್ರಾಮುವನ್ನು ವನಮಾಲೆ ಧರಿಸಿದ ವರಾಹ ಸಾಲಿಗ್ರಾಮವೆಂದು ತಿಳಿಯಬೇಕು. ಹಾಗೂ ಉದ್ದವಾದ ಮುಖ ಕಪ್ಪಾದ ಸಾಲಿಗ್ರಾಮದ ಮೇಲೆ ಚಂದ್ರವಲಯದ ಭಾವವಿದ್ದು, ದ್ವಾರಮಧ್ಯದಲ್ಲಿ

ಶೋಭಿಸುವ ಚಕ್ರವಿದ್ದರೆ ಜ್ಞಾನಿಗಳು ಆ ಸಾಲಿಗ್ರಾಮವನ್ನು ವರಾಹ ಸಾಲಿಗ್ರಾಮವೆಂದು ಅಭಿಪ್ರಾಯಪಡುವರು.

*ಭೂವರಾಹ ಸಾಲಿಗ್ರಾಮ :*

ಸುಖಾಸನಂ ಸುಪೀತಾಭಂ। ಸೂಕ್ಷ್ಮರಂಧ್ರಂಸುಚಕ್ರಕಂ ॥
ಸುದುಷ್ಟ್ರಾಭ್ಯಾಂ ಸಮೋಪೇತಂ। ವರಾಹಂ ಧರಣೀಪ್ರದಂ ॥

ಅರ್ಧಃಶ್ಚಕ್ರಮತಿಸ್ನಿಗ್ಧಂ। ಪೈಷ್ಠೋನ್ನತಮಪೀತಕಮ್ ॥
ವರಾಹಂ ಧಾನ್ಯಫಲದಂ। ಸರ್ವೈರಾರಾಧನೀಯಕಮ್ ॥

ಒಳ್ಳೇ ಪೀಠವಿದ್ದು, ಹಿತವಾದ ಅರಿಶಿಣ ಬಣ್ಣದಿಂದ ಕೂಡಿದ್ದು ಸೂಕ್ಷ್ಮವಾದ ರಂಧ್ರವಿದ್ದು, ಎರಡು ದಾಡೆ ಹಾಗೂ ಚಕ್ರಗಳಿಂದ ಯುಕ್ತವಾದ ಸಾಲಿಗ್ರಾಮವು ಆರಾಧಕನಿಗೆ ಭೂಮಿಯನ್ನೊದಗಿಸುವದು. ಪೀಠಭಾಗದಲ್ಲಿ ಚಕ್ರವಿದ್ದು, ಅತೀ ಕೋಮಲವಾಗಿ ತೋರುತ್ತಿದ್ದು, ಬೆನ್ನು ಸ್ವಲ್ಪ ಎತ್ತರವಾಗಿದ್ದಲ್ಲಿ ಅಂಥ ವರಾಹ ಸಾಲಿಗ್ರಾಮವು ಧನಧಾನ್ಯವನ್ನೀಯುವದು. ಇದನ್ನು ಎಲ್ಲರೂ ಪೂಜಿಸಬಹುದು.

*ನೃವರಾಹ ಸಾಲಿಗ್ರಾಮ:*

ಅಧಶ್ಚಕ್ರಾಂಕಿತಲಸ। ದೇಕದಂಷ್ಟ್ರಂ ಸುನಿರ್ಮಲಂ ॥
ಅಂಕುಶಾಕಾರವದನಂ। ನೃವರಾಹಂ ಶುಭಪ್ರದಮ್ ॥

ಪೀಠದಲ್ಲಿ ಅತಿ ನಿರ್ಮಲವಾದ ಚಕ್ರದ ಗುರುತಿನಲ್ಲಿಯೇ ಒಂದು ದಾಡೆ ಅಥವಾ ಕೋರೇಹಲ್ಲು ಇದ್ದು, ಬಾಯಿಯು ಅಂಕುಶಾಕಾರದಲ್ಲಿದ್ದರೆ ಆ ಸಾಲಿಗ್ರಾಮವನ್ನು ಶುಭ ಕೊಡುವ ನೃವರಾಹ ಸಾಲಿಗ್ರಾಮವೆಂದು ತಿಳಿಯಬೇಕು.

*ಲಕ್ಷ್ಮೀ ನೃವಹಾರ ಸಾಲಿಗ್ರಾಮ:*

ವರಾಹ ಸಕ್ತಿಲಿಂಗಂಚ। ಚಕ್ರೇತುವಿ,ಮೇಸ್ಥಿತೇ ॥
ವಾಮೇಲಕ್ಷ್ಮೀವರಾಹಶ್ಚ । ದಕ್ಷಿಣೇನೃವರಾಹಕಃ ॥

ಯಾವ ಸಾಲಿಗ್ರಾಮಗಳಲ್ಲಿ ಮೂರು ಚಕ್ರಗಳಿದ್ದು ಅದರ ಮಧ್ಯದಲ್ಲಿ ವರಾಹ ಶಕ್ತಿ ಲಿಂಗವಿರುವುದೋ ಅಂಥ ಸಾಲಿಗ್ರಾಮವನ್ನು ಲಕ್ಷ್ಮೀನೃವರಾಹ ಸಾಲಿಗ್ರಾಮವೆಂದು ತಿಳಿಯಬೇಕು.

*ವಿದಾರಣವರಾಹ ಸಾಲಿಗ್ರಾಮ :*

ಅತಿ ಚಕ್ರಂಬೃಹದ್ವಾರಂ। ದಕ್ಷಿಣೋನ್ನತ ಮಸ್ತಕಮ್ ॥
ವಿದಾರಣ ಮಿತಿಖ್ಯಾತಂ। ದುಷ್ಟ್ರಾಭ್ಯಾಮುಪಶೋಭಿತಮ್ ॥

ದ್ವಾರದಲ್ಲಿ ದೊಡ್ಡದಾದ ಚಕ್ರ ಹಾಗೂ ಬಲಬದಿಯಲ್ಲಿ ಎತ್ತರವಾದ ಎರಡು ದಾಡೆಗಳು (ಕೋರೆಹಲ್ಲು) ಶೋಭಿಸುತ್ತಿದ್ದರೆ ಅಂಥ ಸಾಲಿಗ್ರಾಮವನ್ನು ಭೂಮಿಯನ್ನು ಭೇದಿಸುವ ವಿದಾರಣ ನೃವರಾಹ ಸಾಲಿಗ್ರಾಮವೆಂದು ಭಾವಿಸುವದು.

*ಲಕ್ಷ್ಮೀನೃಸಿಂಹ ಸಾಲಿಗ್ರಾಮ:*

ಸಪ್ತಚಕ್ರಂ ಬಹುಮುಖಂ। ಸಮಂತಾತ್‌ಸ್ವರ್ಣಸಂಯುತಮ್ ॥
ಲಕ್ಷ್ಮೀನೃಸಿಂಹೋವಿಖ್ಯಾತೋ। ಭುಕ್ತಿಮುಕ್ತಿಫಲಪ್ರದಮ್ ॥

ವಾಮಪಾರ್ಶ್ವೇಸ್ಥಿತೇಚಕ್ರೇ। ಕೃಷ್ಣವರ್ಣೇನ ಸಂಯುತೇ ॥
ಲಕ್ಷ್ಮೀನೃಸಿಂಹೋವಿಖ್ಯಾತೋ। ಭುಕ್ತಿಮುಕ್ತಿ ಫಲಪ್ರದಮ್ ॥

ಏಳು ಚಕ್ರಗಳು, ಹೆಚ್ಚು ದ್ವಾರಗಳು –ಅವುಗಳ ಸುತ್ತಲೂ ಸುವರ್ಣ

ರೇಖೆಗಳಿದ್ದಲ್ಲಿ ಅಂಥ ಸಾಲಿಗ್ರಾಮವು ಲಕ್ಷ್ಮೀನೃಸಿಂಹ ಸಾಲಿಗ್ರಾಮವೆಂದೆನಿಸುವದು.

*ಪಾತಾಳ ನೃಸಿಂಹ ಸಾಲಿಗ್ರಾಮ :*

ಬಹುಚಕ್ರಂಬೃಹದ್ದ್ವಾರಂ। ಬಹುವರ್ಣಂ ಬಹೂದರಂ।
ಪಾತಾಳ ನರಸಿಂಹಾಖ್ಯಂ। ಭಿಕ್ಷೂಣಾಮುವೃತಪ್ರದಂ।

ದೊಡ್ಡಬಾಯಿ ಅಥವಾ ಮುಖ, ಹೆಚ್ಚು ಚಕ್ರಗಳು, ತರಾವರಿಯ ಬಣ್ಣ, ದೊಡ್ಡ ಹೊಟ್ಟೆ ಈ ಎಲ್ಲ ಲಕ್ಷಣಗಳಿದ್ದಲ್ಲಿ ಆ ಸಾಲಿಗ್ರಾಮವನ್ನು ಪಾತಾಳನೃಸಿಂಹ ಸಾಲಿಗ್ರಾಮವೆನ್ನುವರು. ಇದು ಬೌದ್ಧ ಸನ್ಯಾಸಿಗಳಿಗೆ ಅಮೃತವನ್ನೀಯುವಂತಹದು.

*ಕುಕ್ಷಿನೃಸಿಂಹ ಸಾಲಿಗ್ರಾಮ :*

ಅಸ್ಪಷ್ಟ ಚಕ್ರಮಲ್ಪಾಸ್ಯ। ಮಲ್ಪಭಾರಂ ಮಹೋದರಂ।
ತತ್ಕುಕ್ಷಿನರಸಿಂಹಾಖ್ಯ। ವನವಾಸಿಭಿರರ್ಚಿತಮ್॥

ವಿರಳವಾದ ಚಕ್ರ, ಸಣ್ಣ ವದನ, ಭಾರದಲ್ಲಿ ಕಡಿಮೆ, ಹೊಟ್ಟೆ ಮಾತ್ರ ದೊಡ್ಡದಾಗಿದ್ದಲ್ಲಿ ಅಂಥದನ್ನು ಕುಕ್ಷಿನೃಸಿಂಹ ಸಾಲಿಗ್ರಾಮವೆನ್ನುವರು. ಇದು ವನವಾಸಿಗಳಿಗೆ ಮಾತ್ರ ಪೂಜೆಗೆ ಯೋಗ್ಯವಾದುದು.

*ಯೋಗಾಮರ ನೃಸಿಂಹ ಸಾಲಿಗ್ರಾಮ:*

ನಾರಸಿಂಹೋವಿಶಾಲಾಸ್ಯ:। ಪಾರ್ಶ್ವೇದಂಷ್ಟ್ರಾಕೃತಿಂವಹನ್॥
ಯೋಗಾಮರ ನೃಸಿಂಹಶ್ಚ। ಭೋಗಮೋಕ್ಷಪ್ರ ದೋನೃಣಾಂ॥

ಮುಖವು ವಿಸ್ತಾರವಾಗಿದ್ದು ಎರಡೂ ಬದಿಗಳಲ್ಲಿ ದಾಡೆಗಳ ಗುರುತಿದ್ದರೆ ಅಮರ ನರಸಿಂಹ ಸಾಲಿಗ್ರಾಮ ಎಂದೆನ್ನುವರು. ಆರಾಧಕನಿಗೆ ಜೀವನದ

ಎಲ್ಲ ವಿಧವಾದ ಸುಖಾನುಭವವನ್ನು ಕೊಟ್ಟು ಕೊನೆಗೆ ಮೋಕ್ಷವನ್ನು ದಯಪಾಲಿಸುವಂತಹದು.

*ವೀರನೃಸಿಂಹ ಸಾಲಿಗ್ರಾಮ :*

> ಕಪಿಲಾಂಗಂ ಬೃಹದ್ವಾರಂ। ಸದುಷ್ಟುಂ ವಿಪುಲಂಬಿಲಂ ||
> ನಾರಸಿಂಹಂತು ಸಿಂಹ್ಮಾಭಂ। ಪ್ರದೇಶೇಯತ್ರ ಕುತ್ರಚಿತ್ ||

ಕಂದು ಬಣ್ಣದಿಂದ ಯುಕ್ತವಾಗಿ ಸಿಂಹದಂತೆ ಚಕ್ರಗಳಿಂದ ಶೋಭಿಸುವ ಸಾಲಿಗ್ರಾಮವು ಬಹು ಅಪರೂಪವಾಗಿ ಲಭಿಸುವದು. ಇದನ್ನೇ ವೀರನೃಸಿಂಹ ಸಾಲಿಗ್ರಾಮವೆಂದು ಕರೆಯುವರು.

*ಕಪಿಲನರಸಿಂಹ ಸಾಲಿಗ್ರಾಮ :*

> ಸ್ಥೂಲಚಕ್ರಂ ದ್ವಯಂ ಮಧ್ಯೇ। ಗುಂಜಾಲಾಕ್ಷಾತ್ತವರ್ಣಕಮ್ ||
> ಸ್ಫುಟಿತೋವಿಷಮೋಚಕ್ರೇ। ನಾರಸಿಂಹಸ್ತುಕಾಪಿಲ: ||

ದೊಡ್ಡದಾಗಿರುವ ಎರಡು ಚಕ್ರಗಳು, ಅವುಗಳ ಮಧ್ಯದಲ್ಲಿ ಗುಲಗಂಜಿ ಹಾಗೂ ಅರಗಿನ ಬಣ್ಣದಂತೆ ತೋರುವ ಇನ್ನೊಂದು ಚಕ್ರವಿದ್ದರೆ ಅಂಥ ಸಾಲಿಗ್ರಾಮವನ್ನು ಕಪಿಲನರಸಿಂಹ ಸಾಲಿಗ್ರಾಮವೆಂದು ಗುರುತಿಸಲಾಗುವದು. ಇದನ್ನು ಪೂಜಿಸಿದಲ್ಲಿ ಯುದ್ಧದಲ್ಲಿ ಜಯ ಹಾಗೂ ಜೀವನದಲ್ಲಿ ಮೋಕ್ಷ ಪ್ರಾಪ್ತಿಯಾಗುವದು.

*ವಾಮನ ಸಾಲಿಗ್ರಾಮ :*

> ಅತಿಹ್ರಸ್ವೋವರ್ತುಳಶ್ಚ ವಾಮನಃ ಪರಿಕೀರ್ತಿತಃ ||
> ಯೋವಾಮನಾಭಿದೋದೇವಃ। ಶ್ವೇತಬಿಂದುಯುತೇಮುಖೇ ||

ಚಿಕ್ಕದಾಗಿದ್ದು ಉರುಟಾಗಿರುವ ಹಾಗೂ ವದನದಲ್ಲಿ ಬಿಳಿಯ ಮಚ್ಚೆ ಇರುವ ಸಾಲಿಗ್ರಾಮವೇ ವಾಮನ ಸಾಲಿಗ್ರಾಮವೆನಿಸುವದು.

*ದಧಿವಾಮನ ಸಾಲಿಗ್ರಾಮ :*

ದಧಿವಾಮನಸಂಜ್ಞಾಸ್ಯಾತ್। ಗೋಭೂಧಾನ್ಯಫಲಪ್ರದಃ॥
ವರ್ತುಳಂ ಸ್ನಿಗ್ಧಮತ್ಯಂತಂ। ಸ್ಪಷ್ಟಚಕ್ರಸಮನ್ವಿತಮ್॥

ಕೋಮಲ ಸ್ಪರ್ಶಯುಕ್ತವಾದುದು, ನೆಗೆದು ತೋರುವ ಚಕ್ರದಿಂದ ಕೂಡಿದ್ದರೆ ಅಂಥದ್ದನ್ನು ದಧಿವಾಮನ ಸಾಲಿಗ್ರಾಮವೆಂದು ಹೇಳುವರು. ಇದನ್ನು ಪೂಜಿಸಿದರೆ ಗೋಸಂಪತ್ತು, ಭೂಸಂಪತ್ತು ಲಭಿಸುವದು.

*ಹ್ರಸ್ವೋನ್ನತ ವಾಮನ ಸಾಲಿಗ್ರಾಮ :*

ಹ್ರಸ್ವಮುನ್ನತ ಮುಚ್ಚೈರ್ವಾದೀರ್ಘಾಸ್ಯಮತಿಗಹ್ವರಮ್॥
ಸ್ಫುರದ್ರೇಖಾವಲಯಿತಂ। ನಾಭಿಸ್ತ್ವಸ್ವೋನ್ನತಾಭವೇತ್॥

ಚಿಕ್ಕದಾಗಿ ಎತ್ತರವಾಗಿದ್ದು ಆ ಎತ್ತರದಲ್ಲಿಯೇ ಉದ್ದವಾದ ಬಾಯಿಯನ್ನು ಹೋಲುವ ದ್ವಾರವಿದ್ದು, ಅಲ್ಲಲ್ಲಿ ನಿರಿಗೆಗಳಿದ್ದಲ್ಲಿ ಹೊಕ್ಕಳವೂ ಸಹ ಸ್ವಲ್ಪ ಎತ್ತರದಲ್ಲಿದ್ದರೆ, ಅದನ್ನು ಹ್ರಸ್ವೋನ್ನತ ವಾಮನ ಸಾಲಿಗ್ರಾಮವೆನ್ನುವರು. ಅಂಥ ಸಾಲಿಗ್ರಾಮವು ಬಹು ವಿಶೇಷವಾದುದು.

*ವೈಶಾಖ ವಾಮನ ಸಾಲಿಗ್ರಾಮ :*

ಚಕ್ರಸ್ತೂಭಯಪಾರ್ಶ್ವೇತು। ಸ್ನುಹೀಪುಷ್ಪಾಕೃತಿರ್ಭವೇತ್॥
ಕೇಸರಾಭಂತುವೈಶಾಖಂ। ದೃಶ್ಯತೇಚಕ್ರಪಾರ್ಶ್ವತಃ॥

ವಾಮನಂಗೃಹಿಣಾಂ ಶ್ರೇಷ್ಠಂ। ಸುಖಸೌಭಾಗ್ಯಸಂಪದಂ॥
ಅನ್ನವೃದ್ಧಿಂ ಪ್ರಜಾವೃದ್ಧಿಂ। ಭೂಲಾಭಂ ದಿಶತಿಧ್ರುವಂ॥

ಚಕ್ರಕುಂಡಲಸಂಯುಕ್ತಂ। ವಕ್ರಂವಾಬಿಂದು ಪೂರಿತಮ್॥
ಹ್ರಸ್ವಂಚವರ್ತುಲಂಚೈವ। ವಾಮನಂ ಪರಿಕೀರ್ತಿತಮ್॥

ಜಂಬೂಫಲ ಸಮಾಕಾರಂ। ತಪ್ತಕಾಂಚನ ಬಿಂದುವತ್ ॥
ವರ್ತುಳಂಚಾತಿಹ್ರಸ್ವಂಚ। ವಾಮನಂ ಪರಿಕೀರ್ತಿತಮ್ ॥

ಸಾಲಿಗ್ರಾಮದ ಎರಡೂ ಬದಿಗಳಲ್ಲಿ ಕಳ್ಳಿ ಹೂವಿನಾಕಾರದ ಚಕ್ರಗಳಿದ್ದು ಕೇಸರದಂತಹ ಕಡಗೋಲಿನಾಕೃತಿಯುಳ್ಳದ್ದು. ಇದು ಸಂಸಾರಿಗಳಿಗೆಲ್ಲ ಸುಖ ಶಾಂತಿ, ಧನ ಧ್ಯಾನ, ಸಂತಾನ, ಸಂಪತ್ತು ಒದಗಿಸುವಂತಹದು. ಒಂದು ವೇಳೆ ಸ್ವಲ್ಪ ಓರೆಕೋರೆಯಾಗಿ ಕರ್ಣಕುಂಡಲಗಳನ್ನು ಹೋಲುವಂತಹ ಎರಡು ಚಕ್ರಗಳಿದ್ದರೆ ಹಾಗೂ ಎಡಬದಿಯ ಮಧ್ಯದಲ್ಲಿ ಒಂದು ಚಕ್ರ ಮಚ್ಚೆಯೂ ಇದ್ದಲ್ಲಿ ಅದನ್ನು ವೈಶಾಖ ವಾಮನ ಸಾಲಿಗ್ರಾಮವೆಂದು ಗುರುತಿಸುವರು. ಅದೇ ರೀತಿ ನೇರಳೆ ಹಣ್ಣಿನ ಆಕಾರ ಹೋಲುತ್ತಿದ್ದು ಚಿನ್ನದ ಬಟ್ಟನ್ನು ಹೋಲುವ ಮಚ್ಚೆಗಳಿದ್ದಲ್ಲಿ ಅದನ್ನೂ ಸಹ ವೈಶಾಖ ವಾಮನ ಸಾಲಿಗ್ರಾಮವೆಂದು ಹೇಳಿರುವರು.

*ಜಮದಗ್ನಿ ಸಾಲಿಗ್ರಾಮ :*

ಜಾಮದಗ್ನ್ಯಸ್ತು ಭಗವಾನ್। ದ್ವಿವಿಧಃ ಪರಕೀರ್ತಿತಃ ॥
ಸಿತಾಕೃಷ್ಣಾರುಣೋಪೇತ। ದೀರ್ಘಾಕಾರಬೃಹದ್ಬಿಲಮ್ ॥

ಭಿತ್ತಿಭಾಗಗತಂಚಕ್ರಂ । ವಾಮೇವಾದಕ್ಷಿಣೇಪಿವಾ ॥
ಚಕ್ರಾಭಾಭಾಸತೇಬಿಂದುಃ। ಪಶ್ವಾಕೃತಿಭಿರೇವಚ ॥

ಪೃಷ್ಠೇವಾಪಾರ್ಶ್ವತೋವಾಪಿ। ರೇಖಾದಂಷ್ಟ್ರಾಕೃತಿರ್ಭವೇತ್ ॥
ಜಾಮದಗ್ನ್ಯಸ್ತುಭಗವಾ। ನರ್ಚನೀಯೋಮಹೀಭೃತಾಮ್ ॥

ಕೇವಲಂ ಲಾಂಛಿತಃಪೃಷ್ಠೇ। ಪರಾಶ್ವಾಕೃತಿರೇಖಯಾ ॥
ಸಜಾಮದಗ್ನ್ಯೋಭಗವಾನ್। ಶಾಂತಾಖ್ಯಃ ಸರ್ವಕಾದಃ ॥

ಇದರಲ್ಲಿ ಎರಡು ವಿಧಗಳಿವೆ. ಒಂದು ಹೊಂಬೆಳಕನ್ನು ಹೋಲುವ ಬಣ್ಣವಿದ್ದು, ಆಕಾರ ಉದ್ದವಾಗಿದ್ದು ಮೊದಲನೆಯದಾದರೆ, ಅದೇ ಬಣ್ಣದಲ್ಲಿ

ಸ್ವಲ್ಪ ಬಿಲವಿದ್ದರೆ ಅದನ್ನು ಎರಡನೆಯದೆಂದು ಗುರುತಿಸುವರು. ಯಾವ ಸಾಲಿಗ್ರಾಮದ ಎಡಬದಿಯಲ್ಲಾಗಲೀ ಅಥವಾ ಬಲಬದಿಯಲ್ಲಾಗಲೀ ಚಕ್ರವಾಗಲೀ ಇಲ್ಲವೇ ಚಕ್ರದ ಬಿಂದುವಾಗಲಿ ಇರುವದು. ಹಾಗೂ ಬೆನ್ನಿನ ಮೇಲೆ ರೇಖೆಗಳಿರುವದು. ಇಲ್ಲವೇ ಬೆನ್ನಿನ ಮೇಲೆ ಪರಶುವಿನಂತೆ ಆಕಾರವಿರುವದು. ಅಂಥದನ್ನು ಜಮದಗ್ನಿ ಸಾಲಿಗ್ರಾಮವೆಂದು ಹೇಳಲಾಗಿದೆ.

*ರಾಮ ಸಾಲಿಗ್ರಾಮ :*

ಏಕಚಕ್ರಾತುವದನೇ। ಕೃಷ್ಣವರ್ಣಾತು ಶೋಭನಾ ॥
ಸಾರಾಮಮೂರ್ತಿ ರ್ವಿಜ್ಞೇಯಾ। ಬಾಣತೂಣಧನುರ್ಧರಃ ॥

ಕಪ್ಪಾಗಿ ಹೊಳೆಯುತ್ತಿದ್ದು ಬಾಯಿಯಲ್ಲಿ ಒಂದು ಚಕ್ರವಿದ್ದರೆ ಅದನ್ನು ಬಿಲ್ಲು ಬಾಣ ಧರಿಸಿದ ಶ್ರೀರಾಮಮೂರ್ತಿ ಸಾಲಿಗ್ರಾಮವೆಂದೆನ್ನುವರು.

*ಬಾಲರಾಮ ಸಾಲಿಗ್ರಾಮ:*

ಪೃಷ್ಠಭಾಗೇ ಪಂಚರೇಖಾ। ಚಾಪಬಾಣಾಚಪಾರ್ಶ್ವಯೋಃ ॥
ಸಬಾಲರಾಮೋವಿಜ್ಞೇಯಃಪುತ್ರಪೌತ್ರಾಭಿವೃದ್ಧಿದಃ ॥

ಯಾವ ಸಾಲಿಗ್ರಾಮದ ಬೆನ್ನಿನ ಮೇಲೆ ಐದು ರೇಖೆಗಳಿವೆಯೋ, ಬಿಲ್ಲು ಬಾಣದ ಗುರುತುಗಳು ಕಾಣಿಸುತ್ತವೆಯೋ, ಅಂಥ ಸಾಲಿಗ್ರಾಮವನ್ನು ಬಾಲರಾಮ ಸಾಲಿಗ್ರಾಮ ಎಂದೆನ್ನುವರು. ಇದನ್ನು ಪೂಜಿಸಿದಲ್ಲಿ ಕುಟುಂಬವು ಮಕ್ಕಳು ಮೊಮ್ಮಕ್ಕಳಿಂದ ಕೂಡಿ ಸಮೃದ್ಧಿಯಾಗಿರುವದು.

*ರಾಮಲಕ್ಷ್ಮಣ ಸಾಲಿಗ್ರಾಮ :*

ಜಂಬೂಫಲಸಮಾಕಾರಃ। ಕೃಷ್ಣವರ್ಣಸ್ಸಬಿಂದುಕಃ ॥
ಪೃಷ್ಠೇಸುಷಿರಸಂಯುಕ್ತ। ಶ್ಚಕ್ರೇಮಕರಕುಂಡಲೀ ॥

ಲಲಾಟೇಹೇಮರೇಖಾಚ। ಬಿಂದುನಾಚಸುಸಂಯುತಃ।
ಗೋಪಾಲಕ್ಷೇತ್ರ ಉತ್ಪನ್ನೋ। ರಾಮೋಲಕ್ಷ್ಮಣಸಂಯುತಃ ॥

ಯಾವ ಸಾಲಿಗ್ರಾಮವು ನೇರಳೆ ಹಣ್ಣಿನ ಆಕಾರದಲ್ಲಿದ್ದು ಅದರ ಬೆನ್ನಿನ ಮೇಲೆ ತೂತುಗಳಿದ್ದು ಅದರೊಳಗೆ ಕಪ್ಪಾದ ಬಿಂದುವಿನ ಸುತ್ತಲೂ ಮಕರ ಕುಂಡಲದೊಂದಿಗೆ ಸುವರ್ಣ ರೇಖೆ ಹಾಗೂ ಹಣೆಯಲ್ಲಿ ಚಿಕ್ಕ ಬಿಂದು ಇವೆಲ್ಲವುಗಳಿದ್ದಲ್ಲಿ ಗೋಪಾಲ ಕ್ಷೇತ್ರದಲ್ಲಿ ಹುಟ್ಟಿದ ರಾಮಲಕ್ಷ್ಮಣ ಸಾಲಿಗ್ರಾಮವೆಂದು ಗುರುತಿಸುವರು.

*ಕೋದಂಡರಾಮ ಸಾಲಿಗ್ರಾಮ :*

**ಧನೋರೇಖಾಸಮಾಯುಕ್ತೋ। ವರ್ತುಳಃ ಕಿಂಚಿದಾಚಿತಃ ॥**
**ಕೋದಂಡರಾಮನಾಮಾಸ್ಯಾತ್। ಶುದ್ಧನೀಲಾಂಬುದಪ್ರಭಃ ॥**

**ಕಲಿನಾಶಹರಃ ಪ್ರೋಕ್ತಃ। ಸರ್ವಕಾಮಫಲಪ್ರದಃ ॥**
**ಅಪುತ್ರೋಲಭತೇಪುತ್ರಂ। ತಸ್ಯಪೂಜಾಪ್ರಭಾವತಃ ॥**

ಬಿಲ್ಲಿನ ರೇಖೆಯಂತಿದ್ದು ಸ್ವಲ್ಪ ಮುಚ್ಚಿದಂತಿದ್ದರೆ ಅದನ್ನು ಶುದ್ಧ ನೀಲಕಾಯನಾದ ಕೋದಂಡಧಾರಿ ಸಾಲಿಗ್ರಾಮವೆಂದು ತಿಳಿಯಬೇಕು. ಯಾರು ಇದನ್ನು ಭಕ್ತಿಯಿಂದ ಪೂಜಿಸುವರೋ ಅಂಥವರಿಗೆ ಸಂತಾನ ಪ್ರಾಪ್ತಿಯನ್ನಿತ್ತು ಸನ್ಮಾರ್ಗಪ್ರವರ್ತಕನನ್ನಾಗಿ ಮಾಡುತ್ತದೆ.

*ಸೀತಾರಾಮ ಸಾಲಿಗ್ರಾಮ :*

**ಪುರಃಪೃಷ್ಠೆಚಪಾರ್ಶ್ವೇಚ। ಚಿತುಶ್ಚಕ್ರಸಮನ್ವಿತಮ್ ॥**
**ಬಾಣತೂಣಧನುಸ್ಪೃಗ್ವೀ। ಸೀತಾರಾಮಃ ಸುಖಪ್ರದಃ ॥**

ಈ ಸಾಲಿಗ್ರಾಮದ ಮುಂಭಾಗದಲ್ಲಿ ಹಾಗೂ ಬೆನ್ನಿನ ಮೇಲೆ ಮತ್ತು ಎರಡೂ ಬದಿಗಳಲ್ಲಿ ಹೀಗೆ ಒಟ್ಟು ನಾಲ್ಕು ಚಕ್ರಗಳು ಕಾಣುತ್ತಿದ್ದರೆ, ಅಂಥ'ದನ್ನು ಬಿಲ್ಲು ಬಾಣ ಧಾರಿಯಾದ ಸೀತಾರಾಮಮೂರ್ತಿ ಸಾಲಿಗ್ರಾಮವೆನ್ನುವರು.

*ಶ್ರೀರಾಮಮೂರ್ತಿ ಸಾಲಿಗ್ರಾಮ :*

ಚತುಶ್ಚಕ್ರಶಿರಶ್ಚಕ್ರೀ । ರೇಖಾಲಾಂಛನಸಂಯುತಃ ॥
ಶ್ರೀರಾಮಃ ಸೆತುವಿಜ್ಞೇಯೋಃ ಭುಕ್ತಿಮುಕ್ತಿಫಲಪ್ರದಃ ॥

ನಾಲ್ಕು ಚಕ್ರಗಳಿದ್ದು, ಆಕಾರದಲ್ಲಿ ಸ್ವಲ್ಪ ಉರುಟಾಗಿದ್ದು, ಅದರ ಮೇಲೆ ಸುವರ್ಣ ರೇಖೆಗಳಿದ್ದಲ್ಲಿ, ಮೋಕ್ಷಪ್ರದ ಶ್ರೀರಾಮಮೂರ್ತಿ ಸಾಲಿಗ್ರಾಮವೆನ್ನುವರು.

*ಪಟ್ಟಾಭಿರಾಮ ಸಾಲಿಗ್ರಾಮ :*

ರೇಖಾಕಾರಂ ಧನುರ್ಬಾಣಂ । ದ್ವೇದ್ವೇಚಕೇತುಪಾರ್ಶ್ವಯೋಃ ॥
ಶಿರಶ್ಚಕ್ರಮಸಮೋಪೇತಂಃ ಕಲ್ಪದ್ರುಮ ಸಮನ್ವಿತಮ್ ॥

ಕುಕ್ಕುಟಾಂಡ ಸಮಾಕಾರಂ । ಶ್ಯಾಮಳಂಪೃಷ್ಠತೋನ್ನತಮ್ ॥
ಪಟ್ಟಾಭಿರಾಮಮಿತ್ಯಾಹುಃ । ರಾಜ್ಯಲಕ್ಷ್ಮೀಪ್ರದಾಯಕಮ್ ॥

ದ್ವಾರದ್ವಯೇಚತುಃಶ್ಚಕ್ರ । ಶ್ಯಾಮವರ್ಣಸ್ರಗನ್ವಿತಃ ॥
ಸಧನುಃ ಕುಕ್ಕುಟಾಂಡಾಬೋ । ಬಾಣಭೂಖಂಡತೂಣವಾನ್ ॥

ಪೃಷ್ಠಚಕ್ರೀಶಿರಃಶ್ಚಕ್ರೀ । ಸೀತಾರಾಮಸ್ಸುಸುಂದರಃ ॥
ಊರ್ಧ್ವಾಧಸ್ತಾತ್ತ್ರಿವದನಃ ॥ ಷಟ್ಚಕ್ರಃಶ್ಯಾಮಳೋವಿಭುಃ ॥

ಯಾವ ಸಾಲಿಗ್ರಾಮವು ಕಪ್ಪಾಗಿ ತೋಳಮಣಿಯ ಆಕಾರದಂತಿದ್ದು ಬೆನ್ನು ಸ್ವಲ್ಪ ಉಬ್ಬಿಕೊಂಡಿರುತ್ತದೆಯೋ, ಯಾವುದರ ತಲೆಯ ಮೇಲೆ ಒಂದು ಚಕ್ರವಿದೆಯೋ, ಅದರಂತೆ ಬದಿಯಲ್ಲಿಯೂ ಚಕ್ರಗಳನ್ನು ಕಾಣುತ್ತೇವೆಯೋ, ಬಿಲ್ಲು ಬಾಣಗಳಂತೆ ರೇಖೆಗಳು ಕಾಣುತ್ತವೆಯೋ, ಅಂಥದನ್ನು ಪಟ್ಟಾಭಿರಾಮ ಸಾಲಿಗ್ರಾಮವೆನ್ನುವರು. ಅದೇ ರೀತಿ ಸಾಲಿಗ್ರಾಮದಲ್ಲಿ ಎರಡು ದ್ವಾರಗಳು, ನಾಲ್ಕು ಚಕ್ರಗಳು, ಕಪ್ಪಾದ ಬಾಯಿ ಇರುವುದೋ ಅಂಥದನ್ನು

ಶ್ರೀರಾಮಮೂರ್ತಿಯ ಸಾಲಿಗ್ರಾಮವೆಂದು ಭಾವಿಸಲಾಗುವದು. ಒಂದು ವೇಳೆ ಆರು ಚಕ್ರಗಳಿದ್ದಲ್ಲಿ ಅಂಥದನ್ನು ಷಟ್‌ಚಕ್ರೀ ಸೀತಾರಾಮ ಸಾಲಿಗ್ರಾಮ ಎಂದೆನ್ನುವರು. ಶ್ಯಾಮಲಮೂರ್ತಿ ಸಾಲಿಗ್ರಾಮವೆಂದೂ ಅದನ್ನು ಕರೆಯುವರು.

*ತ್ರಿಮೂರ್ತಿ ರಾಮ ಸಾಲಿಗ್ರಾಮ:*

ತ್ರೀಮೂರ್ತಿರಿತಿವಿಖ್ಯಾತೋ। ರಾಮಃಸೌಭಾಗ್ಯದಾಯಕಃ ॥
ಪೂರ್ವಭಾಗ್ಯೆಕವದನಂ। ಪೃಥುಚಕ್ರದ್ವಯಾನ್ವಿತಮ್ ॥

ಮುಂಭಾಗದಲ್ಲಿ ಒಂದು ವದನ ಅಥವಾ ಬಾಯಿ ಎತ್ತರವಾಗಿದ್ದು ಎರಡು ಚಕ್ರಗಳಿದ್ದು ಮೇಲೆ ರೇಖೆಗಳು ಕಾಣುತ್ತಿದ್ದರೆ ಅದನ್ನು ತ್ರಿಮೂರ್ತಿ ರಾಮ ಸಾಲಿಗ್ರಾಮವೆಂದು ಗುರುತಿಸುವರು.

*ತಾರಕ ಬ್ರಹ್ಮ ಸಾಲಿಗ್ರಾಮ :*

ಪಾರ್ಶ್ವದ್ವಯೇದಿವದನೇ। ಸೂಕ್ಷ್ಮಚಕ್ರದ್ವಯಾಂಕಿತೇ ॥
ಪೃಷ್ಠೇಕಲ್ಪದ್ರುಮೋಪೇತಂ। ಬಾಣತೂಣಧನುರ್ಧರಂ ॥

ಸುರಕ್ತ ಮಧುನೀಲಾಭಂ। ತಾರಕ ಬ್ರಹ್ಮಮೂರ್ತಿಕಂ ॥

ಯಾವ ಸಾಲಿಗ್ರಾಮದಲ್ಲಿ ಎರಡೂ ಬದಿಯಲ್ಲಿ ಎರಡೆರಡು ಚಕ್ರಗಳನ್ನು ಬಾಯಿಯೊಳಗೆ ಕಾಣುತ್ತೇವೆಯೋ ಮತ್ತು ಬೆನ್ನಲ್ಲಿ ತೆಂಗಿನ ಮರದಂತೆ ಸಮನಾಗಿ ಬಿಲ್ಲು ಬಾಣಗಳ ಗುರುತುಗಳಿರುತ್ತವೆಯೋ, ಯಾವುದು ಕೆಂಪು, ಕಪ್ಪು ಅಥವಾ ಜೇನಿನ ಬಣ್ಣವನ್ನು ಹೋಲುತ್ತದೆಯೋ ಅಂಥ ಸಾಲಿಗ್ರಾಮವನ್ನು ತಾರಕ ಬ್ರಹ್ಮಮೂರ್ತಿ ಸಾಲಿಗ್ರಾಮವೆನ್ನುವರು.

*ಬಲರಾಮ ಸಾಲಿಗ್ರಾಮ :*

ಬಲರಾಮಃ ಪೀತವರ್ಣೋ। ಲಾಂಗಲಾದ್ಯುಪಶೋಭಿತಃ ॥
ಪೂಜಿತಃ ಸ್ಸುಖದೋನಿತ್ಯಂ। ನಾಗಭೋಗಾಂಕಿತೋಪಿವಾ ॥

ಅರಿಶಿಣ ಬಣ್ಣ ಭೂಮಿಯನ್ನು ಉಳುವ ಸಂಕೇತ ಸೂಚಿಸುವ ನೇಗಿಲು. ಸರ್ಪದ ಹೆಡೆಯ ಚಿಹ್ನೆ. ಅದನ್ನು ಅಶುಭವೆಂದು ಭಾವಿಸದೆ ಪ್ರತಿದಿನವೂ ಪೂಜಿಸಿದಲ್ಲಿ ಈ ಸಾಲಿಗ್ರಾಮವು ಸುಖವನ್ನೇ ಅನುಗ್ರಹಿಸುವದು.

*ಪ್ರಲಂಬಘ್ನ ಸಾಲಿಗ್ರಾಮ :*

> ಏಕಚಕ್ರಸ್ತುವದನೇ। ರಕ್ತವರ್ಣ : ಸಬಿಂದುಕಃ ॥
> ಪ್ರಲಂಬಘ್ನ ಇತಿಖ್ಯಾತೋ। ಪೂಜಿತೋಮೃತ್ಯುದಾಯಕಃ ॥

ಯಾವ ಸಾಲಿಗ್ರಾಮದ ಬಾಯಿಯಲ್ಲಿ ಒಂದೇ ಚಕ್ರವಿದ್ದು ಅದು ಕೆಂಪು ಬಣ್ಣವನ್ನು ಹೋಲುವದೋ ಅಂಥ ಸಾಲಿಗ್ರಾಮವನ್ನು ಪೂಜಿಸಿದಲ್ಲಿ ಅದು ತಪ್ಪದೇ ಮರಣವನ್ನು ತರುವದು. ಆದುದರಿಂದ ಅದನ್ನು ಪೂಜಿಸಬಾರದು.

*ಸಂಕರ್ಷಣ ಸಾಲಿಗ್ರಾಮ :*

> ಕರ್ಷಣಃದ್ವಯಸಂಯುಕ್ತಃ। ಪದ್ಮ ಚಿಹ್ನೇನಚಿಹ್ನಿತಃ ॥
> ಸಂಕರ್ಷಣ ಇತಿಖ್ಯಾತಾ। ಸರ್ವಮಾಕೃಷ್ಯಯಚ್ಛತಿ ॥

ಈ ಸಾಲಿಗ್ರಾಮದಲ್ಲಿ ಉಳುವ ನೇಗಿಲಿನ ಚಿಹ್ನೆ ಇದ್ದು ಒಂದು ಬದಿಯಲ್ಲಿ ತಾವರೆಯ ಚಿಹ್ನೆಯು ಕಾಣಬಹುದೋ ಅದನ್ನು ಸಂಕರ್ಷಣ ಸಾಲಿಗ್ರಾಮವೆನ್ನುವರು. ಇದನ್ನು ಪೂಜಿಸುವದರಿಂದ ಕ್ಷೇಮವಾಗುವದು.

*ಕೃಷ್ಣ ಮೂರ್ತಿ ಸಾಲಿಗ್ರಾಮ :*

> ಕೃಷ್ಣಃ ಪಿಕಃ ಶುಕತನುಃ। ವೃತ್ತಸಂಲಗ್ನಚಕ್ರಯುಕ್ ॥
> ವೇಣುವೇತ್ರಾದಿ ಸಂಯುಕ್ತಃ। ಪೂಜಿತಃ ಸರ್ವಕಾಮದಃ ॥

ಈ ಸಾಲಿಗ್ರಾಮವು ಕೋಗಿಲೆ ಅಥವಾ ಗಿಳಿ ಮೈಬಣ್ಣವನ್ನು ಹೋಲು

ವಂತಹದು. ಒಂದು ವೇಳೆ ಕೊಳಲು ಬೆತ್ತಗಳ ಚಿಹ್ನೆಗಳು ಕಾಣುತ್ತಿದ್ದರೆ ಅದರೊಂದಿಗೆ ಚಕ್ರ ಕಾಣಿಸುವವೋ ಅಂಥ ಸಾಲಿಗ್ರಾಮವೇ ಕೃಷ್ಣಮೂರ್ತಿ ಸಾಲಿಗ್ರಾಮವಾಗಿದೆ. ಇದನ್ನು ಪೂಜಿಸಿದಲ್ಲಿ ಇಷ್ಟಾರ್ಥವು ಸಿದ್ಧಿಸುವದು.

*ಶ್ರೀವತ್ಸ ಕೃಷ್ಣಮೂರ್ತಿ ಸಾಲಿಗ್ರಾಮ:*

**ಕೃಷ್ಣೋಽತಿಕೃಷ್ಣೋಽನಸ್ಥೂಲಃ। ಚಕ್ರಾಂಗೇನಾತಿಶೋಭಿತಃ॥**
**ವನಮಾಲಾವೃತಃ ಪೃಷ್ಠೇ। ಶ್ರೀವತ್ಸಶುಭಲಾಂಛನಃ॥**

ಅತ್ಯಂತ ಕಪ್ಪಾಗಿದ್ದು ಚಪ್ಪಟೆ ಆಕಾರವಿದ್ದು ಅದರ ಬೆನ್ನಿನಲ್ಲಿ ವನಮಾಲೆಯನ್ನು ಹೋಲುವ ಚಕ್ರಗಳಿಂದ ಶೋಭಿಸುವದೋ ಅದನ್ನು ಬಹುಶುಭ ಲಕ್ಷಣದ ಶ್ರೀವತ್ಸಕೃಷ್ಣ ಮೂರ್ತಿ ಸಾಲಿಗ್ರಾಮವೆನ್ನುವರು.

*ಬಾಲಗೋಪಾಲ ಸಾಲಿಗ್ರಾಮ :*

**ವೇತ್ರಶೃಂಗಯುತಃಪಾರ್ಶ್ವೇ। ವೇಣುನಾಶೋಭಿತೋಮುಖೇ॥**
**ಬಾಲಗೋಪಾಲಸಂಜ್ಞೋಽಯಂ। ಗೋಭೂಧಾನ್ಯಫಲಪ್ರದಃ॥**

ಈ ಸಾಲಿಗ್ರಾಮದಲ್ಲಿ ಬೆತ್ತ ಇಲ್ಲವೇ ದನದ ಕೋಡು ಅಥವಾ ಮುಖದಲ್ಲಿ ಕೊಳಲಿನ ಗುರುತಿದೆಯೋ ಅಂಥ ಸಾಲಿಗ್ರಾಮವು ಧನ, ಧಾನ್ಯ, ಭೂಮಿಯನ್ನು ಕೊಡುವಂತಹದು.

*ಮದನ ಗೋಪಾಲ ಸಾಲಿಗ್ರಾಮ :*

**ಯೋಗೋಪಾಲಃಕಲ್ಪವೃಕ್ಷಃ ಚಿಹ್ನಿತೋನೀಲಲೋಹಿತಃ॥**
**ಸಸ್ಯಾನಮದನಗೋಪಾಲೋ। ಮಾಲಾಕುಂಡಲ ಶೋಭಿತಃ॥**

ಇದು ನೀಲದೊಂದಿಗೆ ಕೆಂಪಾಗಿ ತೋರುತ್ತಿದ್ದು ಕಲ್ಪವೃಕ್ಷದ ಚಿಹ್ನೆಯು ಕಾಣುತ್ತಿದ್ದು ಮಾಲಾಕಾರದ ಕರ್ಣಕುಂಡಲದ ಅಲಂಕಾರ ತೋರುವದೋ ಅಂಥ ಸಾಲಿಗ್ರಾಮವು ಮದನಗೋಪಾಲ ಎಂದು ಕರೆಸಿಕೊಳ್ಳುವದು.

### *ಸಂತಾನ ಗೋಪಾಲ ಸಾಲಿಗ್ರಾಮ :*

ದೀರ್ಘಾಕಾರಃಕೃಷ್ಣವರ್ಣ ಶ್ಚಾರ್ಧಚಂದ್ರನಿಭಾನನಃ ॥
ಸಹಿ ಸಂತಾನಗೋಪಾಲಃ। ಪುತ್ರಪೌತ್ರಾದಿ ವೃದ್ಧಿದಃ ॥

ಇದು ಕಪ್ಪಾಗಿಯೂ, ಉದ್ದವಾಗಿಯೂ, ಅರ್ಧಚಂದ್ರನ ಮುಖವನ್ನು ಹೋಲುತ್ತಿದ್ದರೆ ಅಂಥ ಸಾಲಿಗ್ರಾಮವನ್ನು ಸಂತಾನಗೋಪಾಲ ಸಾಲಿಗ್ರಾಮವೆನ್ನುವರು. ಇದನ್ನು ಪೂಜಿಸಿದಲ್ಲಿ ಪುತ್ರ ಪೌತ್ರಾದಿ ಅಭಿವೃದ್ಧಿಯನ್ನೀಯುವುದು.

### *ಗೋವರ್ಧನ ಸಾಲಿಗ್ರಾಮ :*

ವರ್ತುಳೋಮಸ್ತಕೇನಿಮ್ನ। ಪಾರ್ಶ್ವೇರಜತಬಿಂದುಮಾನ್ ॥
ಗೋವರ್ಧನಾಖ್ಯಗೋಪಾಲೋ। ದಿವ್ಯರೇಖಾತುದಕ್ಷಿಣೇ ॥

ತಸ್ಯ ಸನ್ನಿಧಿಮಾತ್ರೇಣ। ನಭವಂತ್ಯಾಪದಃಕ್ವಚಿತ್।
ಪೂಜಯಿತ್ವಾಪರಂಮರ್ತ್ಯ। ಪ್ರಾಪ್ನೋತೀಹಪರತ್ರಚ ॥

ಈ ಸಾಲಿಗ್ರಾಮವು ಉರುಟಾಗಿ ಶಿರೋಭಾಗದಲ್ಲಿ ಸ್ವಲ್ಪ ತಗ್ಗಿದ್ದು, ಅದರ ಬದಿಯಲ್ಲಿ ಬೆಳ್ಳಿಯಂತಹ ಬೊಟ್ಟಿನ ಗುರುತಿದ್ದು ಅದರೊಂದಿಗೆ ಒಂದು ರೇಖೆಯೂ ಕಾಣುತ್ತಿದ್ದರೆ ಅದು ಗೋವರ್ಧನ ಸಾಲಿಗ್ರಾಮವೆನಿಸುವದು. ಅಂಥ ಸಾಲಿಗ್ರಾಮವು ಮನೆಯಲ್ಲಿದ್ದರೆ ಸಾಕು, ಕುಟುಂಬದ ರೋಗಗಳೆಲ್ಲ ಪರಿಹಾರವಾಗುವದು. ಭಕ್ತಿಯಿಂದ ಪ್ರತಿದಿನ ಪೂಜಿಸಿದಲ್ಲಿ ಆತ ಇಹಪರಗಳಲ್ಲಿ ಸುಖ ಹೊಂದುವನು.

### *ಕಾಳೀಯ ಮರ್ದನ ಸಾಲಿಗ್ರಾಮ :*

ರೇಖಾಸ್ಯಾದ್ವಾಮಪರ್ಯಂತಂ। ಮುಖಾಧಸ್ತಾತ್ತುಸಶೋಭನಾ ॥
ರೇಖಾಸ್ಯಾತ್ಕೃಷ್ಣವರ್ಣಾಭ್ಯಾ। ಬಿಂದುದ್ವಯಸಮನ್ವಿತಃ ॥

ಕಾಳೀಯಮರ್ದನಃ ಕೃಷ್ಣ। ಸರ್ವಾರಾತಿವಿನಾಶನಃ॥
ತಸ್ಯಸನ್ನಿಧಿಮಾತ್ರೇಣ। ನಾಶಯೇತ್ತ್ರಿವಿಧಂವಿಷಮ್॥

ತಾಪತ್ರಯ ವಿನಿರ್ಮುಕ್ತಃ। ಸುಖೀಭವತಿ ಮಾನವಃ॥
ಸವ್ಯಾಪಸ ವ್ಯರೇಖಾಭ್ಯಾಂ। ಭೂಷಿತಃ ಸೂಕ್ಷ್ಮಚಕ್ರತಃ॥

ಈ ಸಾಲಿಗ್ರಾಮದ ಮುಖದಿಂದ ಕೆಳಗೆ ಎರಡು ಕಪ್ಪಾದ ಬೊಟ್ಟುಗಳು, ಎಡಬದಿಯಲ್ಲಿ ರೇಖೆಗಳಿದ್ದಲ್ಲಿ. ಅದನ್ನು ಕಾಳಿಯ ಮರ್ದನ ಕೃಷ್ಣ ಎಂದು ಭಾವಿಸಬೇಕು. ಒಂದು ವೇಳೆ ಈ ಸಾಲಿಗ್ರಾಮವು ಮನೆಯಲ್ಲಿದ್ದ ಮಾತ್ರಕ್ಕೆ ಶತ್ರು ನಿವಾರಣೆಯಾಗಿ ತಾಪತ್ರಯಗಳಿಂದ ಪರಿಹಾರವಾಗುವದು. ಎಡಬಲಗಳಲ್ಲಿ ಸೂಕ್ಷ್ಮಚಕ್ರಗಳಿದ್ದಲ್ಲಿ ಅದರೊಂದಿಗೆ ರೇಖೆಗಳು ಕಾಣುತ್ತಿದ್ದಲ್ಲಿ ಅಂಥ ಸಾಲಿಗ್ರಾಮವಂತೂ ಸಂಸಾರಿಗೆ ಸುಖವನ್ನೀಯುವಂತಹದು.

### *ವಿಜಯ ಸಾರಥಿ ಸಾಲಿಗ್ರಾಮ:*

ಪಾರ್ಶ್ವೇಖುರಯುತೋದೇವಃ। ಕೃಷ್ಣೋವಿಜಯಸಾರಥಿಃ॥
ಕೃಷ್ಣವರ್ಣೋನಚಸ್ಥೂಲಃ। ಲಗ್ನೇಚಕ್ರೇಸುಶೋಭನೇ॥

ಯಾವ ಸಾಲಿಗ್ರಾಮದ ಬದಿಗಳಲ್ಲಿ ಗೊರಸಿನ ಗುರುತುಗಳಿವೆಯೋ, ಕಪ್ಪು ವರ್ಣದ್ದಾಗಿ ಹೆಚ್ಚು ದೊಡ್ಡದಾಗಿರುವದೋ, ಚಕ್ರದಿಂದ ಶೋಭಿಸುವದೋ, ಅಂಥದನ್ನು ವಿಜಯ ಸಾರಥಿ ಸಾಲಿಗ್ರಾಮ ಎಂದು ಹೇಳುವರು.

### *ಸ್ಯಮಂತಕಹರಿ ಸಾಲಿಗ್ರಾಮ :*

ವನಮಾಲಾಪರಿವೃತಃ। ಪೃಷ್ಠೇಶ್ರೀವತ್ಸಲಾಂಛನಃ॥
ಸ್ಯಮಂತಕ ಹರಿರ್ಜ್ಞೇಯಃ। ಪುಷ್ಟಿಶ್ರೀಕೀರ್ತಿದೋನೃಣಾಂ॥

ಈ ಸಾಲಿಗ್ರಾಮದ ಬೆನ್ನಿನ ಮೇಲೆ ಶ್ರೀವತ್ಸಮಣಿಯ ಚಿಹ್ನೆಯಿದ್ದು ಅದರ ಸುತ್ತಲೂ ವನಮಾಲೆ ಗೋಚರಿಸುವದೋ ಅಂಥದನ್ನು ಸ್ಯಮಂತಕಹರಿ

ಸಾಲಿಗ್ರಾಮ ಎಂದು ತಿಳಿಯಬೇಕು. ಇದನ್ನು ಪೂಜಿಸಿದಲ್ಲಿ ಸಂಸಾರಿಗೆ ದೇಹಪುಷ್ಟಿ ಹಾಗೂ ಕೀರ್ತಿಯು ಲಭಿಸುವದು.

*ಚಾಣೂರಮರ್ದನ ಸಾಲಿಗ್ರಾಮ:*

ರಕ್ತಬಿಂದುದ್ವಯಯುತಃ। ಶ್ಯಾಮೋದಂತಿ ಭುಜೋಪಮಃ॥
ರೇಖಾದಕ್ಷಿಣತೋವಾಮೇ। ಮುಷ್ಟಿರ್ವಾದೃಢಬಿಂದುಕಃ॥

ಚಾಣೂರಮರ್ದಗೋಪಾಲಃ। ಸರ್ವಶತ್ರುನಿಕೃಂತನಃ॥

ಬೆನ್ನಿನಲ್ಲಿ ಎರಡು ಕೆಂಪು ಬೊಟ್ಟುಗಳು, ಬಲಬದಿಯಲ್ಲಿ ಆನೆಯ ಭುಜವನ್ನು ಹೋಲುವ ಕಪ್ಪಾದ ಆಕೃತಿ, ಮುಷ್ಟಿಯನ್ನು ಸೂಚಿಸುವ ಬಿಂದುಗಳಿರುತ್ತವೆಯೋ ಅದನ್ನು ಚಾಣೂರಮರ್ದನ ಸಾಲಿಗ್ರಾಮವೆಂದು ಗುರುತಿಸುವರು. ಇದು ಎದುರಾಳಿಗಳನ್ನು ನಾಶಪಡಿಸುವದು.

*ಕಂಸಮರ್ದನ ಸಾಲಿಗ್ರಾಮ :*

ಪೂರ್ವಭಾಗ್ಯೈಕವದನಂ। ಪಾರ್ಶ್ವೇಚವದನಂ ಭವೇತ್॥
ಕಂಸಮರ್ದೀರಿಪುಹರೋ। ನೀಲಾಂಬುದ ಸಮಪ್ರಭಃ॥

ಸನ್ಮುಖದಲ್ಲೊಂದು ಮುಖ ಹಾಗೂ ಅದರ ಬದಿಯಲ್ಲೊಂದು ಮುಖವಿದ್ದರೆ ನೀಲಕೋಮಲ ವರ್ಣದಿಂದ ಕೂಡಿದ್ದರೆ ಅಂಥದನ್ನು ಕಂಸಮರ್ದನ ಕೃಷ್ಣ ಸಾಲಿಗ್ರಾಮವೆಂದು ತಿಳಿಯಬೇಕು.

*ಗೋಪಾಲ ಸಾಲಿಗ್ರಾಮ :*

ದ್ವಿಚಕ್ರಂ ಚೈಕಸಂಲಗ್ನಂ। ಪೂರ್ಣಭೋಗಂಚ ವರ್ತುಳಂ॥
ಗೋಪಾಲಮೂರ್ತಿರ್ವಿಜ್ಞೇಯಂ। ಸರ್ವರಂಧ್ರೇಣ ಸಂಯುತಂ॥

ಒಂದು ಚಕ್ರಕ್ಕೆ ಹೊಂದಿಕೊಂಡು ಮತ್ತೆರಡು ಚಕ್ರಗಳಿದ್ದರೆ ಕೊಳಲಿನಂತಹ

ರಂಧ್ರದ ಚಿಹ್ನೆಗಳಿದ್ದರೆ ಅದನ್ನು ಪೂರ್ಣಭೋಗ ಗೋಪಾಲ ಸಾಲಿಗ್ರಾಮವೆಂದು ತಿಳಿಯಬೇಕು.

*ವೇಣುಗೋಪಾಲ ಸಾಲಿಗ್ರಾಮ :*

ಗೋಪಾಲಮೂರ್ತಿರ್ವಿಜ್ಞೇಯಾ । ಸರ್ವರಂಧ್ರೇಣಸಂಯುತಾ ॥
ವೇಣುರಂಧ್ರೇಣ ಸಂಯುಕ್ತಾ । ವೇತ್ರರೇಖಾಸಮನ್ವಿತಾ ॥

ವೇಣುಗಾನರತಃ ಕೃಷ್ಣೋ । ವಿತ್ತೈಶ್ವರ್ಯಪ್ರದಾಯಕಃ ॥

ಕೊಳಲಿನಲ್ಲಿರುವಂತಹ ತೂತುಗಳು ಬೆತ್ತದಂತಹ ರೇಖೆಗಳಿದ್ದರೆ ಅಂಥ ಸಾಲಿಗ್ರಾಮವು ವೇಣುಗಾನನಿರತ ಶ್ರೀಕೃಷ್ಣ ಸಾಲಿಗ್ರಾಮವೆಂದು ಅರಿಯಬೇಕು. ಇದು ಐಶ್ವರ್ಯ ತರುವಂತಹದು

*ನಿರ್ವಾಣಪದ ಗೋಪಾಲ ಸಾಲಿಗ್ರಾಮ :*

ಅಂತರ್ಗಹ್ವರ ಸಂಯುಕ್ತ । ಶ್ಚಕ್ರ ಹೀನಸ್ತಥಾಭವೇತ್ ॥
ನಿರ್ವಾಣಪದಗೋಪಾಲೋ । ದದಾತಿಪರಮಾಂಶ್ರೀಯಂ ॥

ಚಕ್ರಗಳಿಲ್ಲದೆ ಕೇವಲ ಗುಹೆಯಂತೆ ತೋರುವ ಚಿಹ್ನೆಗಳಿದ್ದರೆ ಅದನ್ನು ನಿರ್ವಾಣಪದ ಗೋಪಾಲ ಸಾಲಿಗ್ರಾಮವೆನ್ನುವರು. ಇದು ಸಂಪತ್ತನ್ನೀಯುವದು.

*ಕಲ್ಕಿ ಸಾಲಿಗ್ರಾಮ :*

ಕೃಪಾಣಾಕೃತಿ ರೇಖಾಢ್ಯಂ । ದ್ವಾರಸ್ಯೋಪರಿಪೃಷ್ಠತಃ ॥
ಮ್ಲೇಚ್ಛನಾಶೀಭವೇತ್ಕಲ್ಕಿಃ ಕಲಿಕಲ್ಮಶನಾಶನಃ ॥

ಸೂಕ್ಷ್ಮವಾದ ಒಂದು ದ್ವಾರ ಅದರಿಂದಾಚೆಗೆ ಆಸನದ ಗುರುತುಗಳು, ದ್ವಾರದ ಮೇಲ್ಭಾಗದಲ್ಲಿ ಕತ್ತಿಯಾಕಾರದ ಚಿಹ್ನೆಗಳಿದ್ದಲ್ಲಿ ಅಂಥದನ್ನು ಕಲ್ಕಿ ಸಾಲಿಗ್ರಾಮವೆಂದು ಕರೆಯುವರು. ಇದು ಕಲಿಕಲ್ಮಶವನ್ನು ದೂರಮಾಡುವದು.

*ಬುದ್ಧ ಮೂರ್ತಿ ಸಾಲಿಗ್ರಾಮ :*

ದೀರ್ಘಾಕಾರ ಪೀತವರ್ಣಃ। ತ್ರಿಚಕ್ರಾಚಕ್ರಕೋಪಿವಾ ॥
ಬುದ್ಧಃಕಲಿಘ್ನೋಭಗವಾ। ನರ್ಚಿತೋಭೋಗಮೋಕ್ಷಕೃತ್ ॥

ಮೂರು ಚಕ್ರಗಳು ಕಲ್ಲಕ್ಕಿಯ ಆಕೃತಿ ಇದ್ದು ಉದ್ದವಾಗಿ ಅರಿಶಿಣ ಬಣ್ಣದಿಂದ ಕೂಡಿದ್ದಲ್ಲಿ ಅದನ್ನು ಬುದ್ಧ ಸಾಲಿಗ್ರಾಮವೆಂದು ತಿಳಿಯಬೇಕು. ಇದನ್ನು ಪೂಜಿಸಿದಲ್ಲಿ ಮೋಕ್ಷಪ್ರಾಪ್ತಿ ಲಭಿಸುವದು.

*ಕೇಶವ ಸಾಲಿಗ್ರಾಮ :*

ಸೌಭಾಗ್ಯಂಕೇಶವೋದದ್ಯಾತ್। ಚತುಃಷ್ಕೋಣೋಭವೇತ್ತುಸಃ ॥
ಚತುಶ್ಚಕ್ರಸಮೋಪೇತಾ। ಹ್ಯಚಕ್ರೋವಾಸ್ರಗನ್ವಿತಃ ॥

ಇದು ನಾಲ್ಕು ಕೋನಗಳಿಂದಲೂ, ನಾಲ್ಕು ಚಕ್ರಗಳಿಂದಲೂ ಮಾಲಾಯುಕ್ತವಾದಂತೆ ತೋರುವದು. ಕೆಲವು ಸಂದರ್ಭದಲ್ಲಿ ಚಕ್ರಗಳಿಲ್ಲದೆಯೂ ಇರಬಹುದು. ಇದನ್ನು ಪೂಜಿಸಿದಲ್ಲಿ ಸಕಲ ಸೌಭಾಗ್ಯ ಲಭಿಸುವದು.

*ಶ್ಯಾಮನಾರಾಯಣ ಸಾಲಿಗ್ರಾಮ:*

ಶ್ಯಾಮೋನಾರಾಯಣೋದೇವೋ। ನಾಭಿಚಕ್ರಸ್ತಥೋನ್ನತಃ ॥
ವಾಮೇರೇಖಾತ್ರಯೋಪೇತೋ। ದಕ್ಷಿಣೇಸುಷಿರಂಪೃಥು ॥

ಇದು ಸ್ವಲ್ಪ ಎತ್ತರವಾದ ನಾಭಿಚಕ್ರವನ್ನುಳ್ಳದ್ದು. ಹಾಗೂ ಎಡಬದಿಯಲ್ಲಿ ಮೂರು ರೇಖೆ, ದಕ್ಷಿಣದ ಬದಿಯಲ್ಲಿ ದೊಡ್ಡ ದ್ವಾರವಿದ್ದಲ್ಲಿ ಶ್ಯಾಮನಾರಾಯಣವೆಂದು ಅದನ್ನು ತಿಳಿಯಬೇಕು.

*ಲಕ್ಷ್ಮೀನಾರಾಯಣ ಸಾಲಿಗ್ರಾಮ :*

ಅಧಶ್ಚೋರ್ಧ್ವಂಪಾರ್ಶ್ವಯೋಶ್ಚ। ಚತುಶ್ಚಕ್ರೋಭವೇದ್ಯದಿ ॥
ಲಕ್ಷ್ಮೀನಾರಾಯಣೋದೇವೋ। ಹ್ಯೈಶ್ವರ್ಯಫಲದೋನೃಣಾಂ ॥

ಲಕ್ಷ್ಮೀನಾರಾಯಣೋಜ್ಞೇಯಶ್ಚತುಶ್ಚಕ್ರೈರಲಂಕೃತಃ॥
ವನಮಾಲಾಪರಿವೃತೋ। ಅಧರೋತ್ತರಪಾರ್ಶ್ವಗಃ॥

ತನ್ಮೂರ್ತಿದರ್ಶನಾತ್ಪುಂಸಾ। ಮಷ್ಟೈಶ್ವರ್ಯಫಲಪ್ರದಃ॥

ಕೆಳಗೆ ಎರಡು ಬದಿಗಳಲ್ಲಿ ನಾಲ್ಕು ಚಕ್ರಗಳಿದ್ದರೆ, ಅಥವಾ ಅದೇ ಸಾಲಿಗ್ರಾಮದಲ್ಲಿ ವನಮಾಲೆಯು ಗೋಚರಿಸುತ್ತಿದ್ದರೆ ಅಂಥ ಸಾಲಿಗ್ರಾಮವನ್ನು ಲಕ್ಷ್ಮೀನಾರಾಯಣ ಎಂದು ಗುರುತಿಸಲಾಗುವದು. ಈ ಸಾಲಿಗ್ರಾಮದ ದರ್ಶನ ಮಾತ್ರದಿಂದ ಮಾನವನಿಗೆ ಐಶ್ವರ್ಯ ವಾಹನಾದಿ ಭೋಗಗಳು ಲಭಿಸುವವು.

*ಮಾಧವ ಸಾಲಿಗ್ರಾಮ :*

ಮಧ್ಯವರ್ಣೋಮಧ್ಯಚಕ್ರ :। ಸ್ನಿಗ್ಧಸೂಕ್ಷ್ಮತನು ಸ್ತಥಾ॥
ಮಾಧವಃ ಸತುವಿಜ್ಞೇಯೋ। ಭೋಗಮೋಕ್ಷಪ್ರದಃ ಸತಾಮ್॥

ಕೋಮಲವಾದ ಚಕ್ರ, ಸಾಮಾನ್ಯ ಮೈಬಣ್ಣವಿರುವ ಸಾಲಿಗ್ರಾಮವನ್ನು ಮಾಧವ ಸಾಲಿಗ್ರಾಮ ಎಂದು ಗುರುತಿಸಲಾಗುವದು. ಈ ಸಾಲಿಗ್ರಾಮದ ಪೂಜೆಯಿಂದ ಸಜ್ಜನರು ಮೋಕ್ಷವನ್ನು ಹೊಂದುವರು.

*ಗೋವಿಂದ ಸಾಲಿಗ್ರಾಮ :*

ನಾತಿಸ್ಥೂಲ : ಪಂಚವಕ್ತ್ರೋ। ಗೋವಿಂದೋದಶಚಕ್ರಕಃ॥
ಕೃಷ್ಣವರ್ಣೋಬೃಹದ್ದ್ವಾರ। ಉನ್ನತೋಮಧ್ಯನಿಮ್ನಗಃ॥

ಕಪ್ಪಾಗಿದ್ದು ಉಬ್ಬಿಕೊಂಡು ಅಷ್ಟೊಂದು ದೊಡ್ಡದಾಗಿರದೆ, ಐದು ಮುಖವಿದ್ದು ಅಗಲವಾದ ಬಾಯಿ, ಹತ್ತು ಚಕ್ರಗಳಿಂದ ಕೂಡಿದ್ದರೆ ಅದನ್ನು ಗೋವಿಂದ ಸಾಲಿಗ್ರಾಮವೆನ್ನುವರು.

*ಮಹಾವಿಷ್ಣು ಸಾಲಿಗ್ರಾಮ :*

ಕೃಷ್ಣವರ್ಣಸ್ತಥಾವಿಷ್ಣು : । ಸ್ಥೂಲಚಕ್ರಃ ಸುಶೋಭನಃ ॥
ಗದಾಕಾರಾತಥಾರೇಖಾ । ದೃಶ್ಯತೇಮಧ್ಯದೇಶತಃ ॥

ವಿವೃತಾಸ್ಯೋವಾಮಚಕ್ರ । ಉನ್ನತೋಮಧ್ಯನಿಮ್ನಗಃ ॥
ಕೃಷ್ಣವರ್ಣಸ್ತಾರ್ಕ್ಷ್ಯವರ್ಣೋ । ವಿಷ್ಣುರ್ವಿಷಯಭೋಗದಃ ॥

ಸಾಲಿಗ್ರಾಮದಲ್ಲಿ ಎಲ್ಲಿಯಾದರೂ ಗದಾಕಾರದ ರೇಖೆಗಳಿದ್ದು, ಉಬ್ಬಿದ ಚಕ್ರಗಳಿಂದ ಶೋಭಿಸುವ ಅಥವಾ ಗರುಡನಂತಹ ಬಣ್ಣ, ಬಾಯಿ ಹಗುರವಾಗಿದ್ದು ಎಡಬದಿಗಳಲ್ಲಿ ಒಂದೊಂದು ಚಕ್ರ, ಮಧ್ಯದಲ್ಲಿ ಉಬ್ಬಿದ್ದು ಹಾಗೂ ತಗ್ಗಾಗಿದ್ದರೆ ಅಂಥದನ್ನು ಮಹಾವಿಷ್ಣು ಸಾಲಿಗ್ರಾಮವೆಂದು ಕರೆಯುವರು.

*ಮಧುಸೂದನ ಸಾಲಿಗ್ರಾಮ :*

ಮಧುಸೂದನದೇವಶ್ಚ । ಏಕಚಕ್ರೋಮಹಾದ್ಯುತಿಃ ॥
ಸ್ವರ್ಣವರ್ಣಸಮಾಯುಕ್ತೋ । ಮಹಾತೇಜಪ್ರದಃ ಶುಭಃ ॥

ಇದು ಚಿನ್ನದ ಬಣ್ಣದಿಂದ ಕೂಡಿದ್ದು, ಒಂದು ಚಕ್ರವಿದ್ದು ಹೆಚ್ಚು ಭಾರವಿದ್ದಲ್ಲಿ ಅದನ್ನು ಮಧುಸೂದನ ಸಾಲಿಗ್ರಾಮವೆಂದು ಗುರುತಿಸುವರು. ಈ ಸಾಲಿಗ್ರಾಮದ ಪೂಜೆಯಿಂದ ತೇಜಸ್ಸು ಅಭಿವೃದ್ಧಿಯಾಗುವದು.

*ತ್ರಿವಿಕ್ರಮ ಸಾಲಿಗ್ರಾಮ :*

ತ್ರಿವಿಕ್ರಮಸ್ತ್ರಿಕೋಣಾಢ್ಯ । ಶ್ಚಕ್ರತ್ರಯ ವಿಭೂಷಿತಃ ॥
ಪ್ರಯತ್ನೇನದ್ವಿಜಾತೀನಾಂ । ಸದಾಪೂಜ್ಯಸ್ಸನೇತರೈಃ ॥

ತ್ರಿಕೋಣಾಕಾರದಲ್ಲಿ ಮೂರು ಚಕ್ರಗಳು ಶೋಭಿಸುತ್ತಿದ್ದಲ್ಲಿ ಅದನ್ನು

ತ್ರಿವಿಕ್ರಮವೆಂದೆನ್ನುವರು. ಯಾರು ಯಜ್ಞೋಪವೀತ ಧಾರಣ ಮಾಡಿಕೊಳ್ಳುತ್ತಾರೆಯೋ, ಅಂದರೆ ಗಾಯತ್ರೀ ಪಠನ ಮಾಡುವರೋ ಅಂಥವರು ಮಾತ್ರ ಈ ಸಾಲಿಗ್ರಾಮವನ್ನು ಪೂಜಿಸಲು ಅರ್ಹರು. (ಯೋಗ್ಯರು).

*ಶ್ರೀಧರ ಸಾಲಿಗ್ರಾಮ :*

ಶ್ರೀಧರಸ್ತುತಥಾಜ್ಞೇಯ। ಶ್ಚಿಹ್ನಿತೋವನಮಾಲಯಾ ॥
ಕದಂಬಕುಸುಮಾಕಾರೋ। ರೇಖಾಪಂಚಕಸಂಯುತಃ ॥

ಚಕ್ರಸ್ಯಮಧ್ಯದೇಶೇತು। ಪಂಕಜೇನಸಮನ್ವಿತಃ ॥
ಸೂಕ್ಷ್ಮಾನನಃಶ್ಯಾಮಳಾಭಃ। ಸಪುನಃ ಶ್ರೀಧರಸ್ತಥಾ ॥

ನಿಮ್ನೋದರಸಿರಃಪಾರ್ಶ್ವೇ। ನಿಮ್ನಪೃಷ್ಠಸ್ಸವರ್ತುಳಃ ॥
ನಿಮ್ನ ಚಕ್ರಶ್ಚಾತಿಹ್ರಸ್ವಃ । ಶ್ರೀಧರಃ ಪರಿಕೀರ್ತಿತಃ ॥

ಹೊಟ್ಟೆ ಸ್ವಲ್ಪ ತಗ್ಗು, ಪಾರ್ಶ್ವದಲ್ಲಿ ತಲೆ. ಇನ್ನೊಂದು ಭಾಗವು ಚೆನ್ನಾಗಿದ್ದು ತಗ್ಗಿನಲ್ಲಿ ಚಿಕ್ಕ ಚಕ್ರವು ಕೊರೆದಂತಿದ್ದರೆ, ಅದನ್ನು ಶ್ರೀಧರ ಸಾಲಿಗ್ರಾಮವೆಂದು ಕರೆಯುವರು.

*ಹೃಷೀಕೇಶ ಸಾಲಿಗ್ರಾಮ :*

ಅರ್ಧಚಂದ್ರಾಕೃತಿರ್ದೇವೋ। ಹೃಷೀಕೇಶ ಉದಾಹೃತ ॥
ಸ್ಥೂಲಗತರ್ವರ್ಧಚಕ್ರಸ್ಯಾ। ದನಂತಫಲದೋನೃಣಾಂ ॥

ಚಕ್ರವು ಸ್ವಲ್ಪ ಆಳವಾಗಿದ್ದು ಅರ್ಧಚಂದ್ರಾಕಾರದಲ್ಲಿದ್ದರೆ ಅದು ಹೃಷೀಕೇಶ ಎಂದು ಕರೆಸಿಕೊಳ್ಳುವದು. ಇದು ಅನಂತ ಫಲವನ್ನೀಯು ವಂತಹದು.

*ಪದ್ಮನಾಭ ಸಾಲಿಗ್ರಾಮ :*

ಪದ್ಮರೇಖಾಸಮಾಯುಕ್ತೋ। ವನಮಾಲಾವಿಭೂಷಿತಃ॥
ಪದ್ಮನಾಭಃಪದ್ಮನಿಭಃ। ಪ್ರತ್ಯಹಂಸುಖದೋರ್ಚಿತಃ॥

ನಿಷ್ಕೇಸರೋರ್ಧ್ವಚಕ್ರಸ್ತು। ಅಧಶ್ಚಕ್ರೇಸಕೇಸರಃ॥
ಪದ್ಮನಾಭ ಇತಿಖ್ಯಾತೋ। ವಿಪರೀತ್ಯೈರ್ಹಲಾಯುಧಃ॥

ಮೇಲಿರುವ ಚಕ್ರಗಳಲ್ಲಿ ಕಿರಣಗಳ ಗುರುತಿರದೆ, ಕೆಳಗಿರುವ ಚಕ್ರಗಳಲ್ಲಿ ಗುರುತಿದ್ದ ಪಕ್ಷದಲ್ಲಿ ಅದನ್ನು ಪದ್ಮನಾಭ ಸಾಲಿಗ್ರಾಮ ಎಂದೆನ್ನುವರು. ಇದಕ್ಕೆ ವ್ಯತ್ಯಾಸವಾದ ಚಕ್ರಗಳಿದ್ದಲ್ಲಿ ಅದನ್ನು ಬಲರಾಮ ಮೂರ್ತಿ ಎಂದು ಗುರುತಿಸುವರು. ಅಲ್ಲದೆ ತಾವರೆಯಂತಹ ವನಮಾಲಾ ಚಿಹ್ನೆಗಳ ರೇಖೆಗಳಿದ್ದು ಅದು ಕಮಲದ ಕಾಂತಿಯುಳ್ಳದ್ದಾಗಿದ್ದರೆ ಅಂಥದನ್ನು ಪದ್ಮನಾಭ ಎಂದೆನ್ನುವರು. ಈ ಸಾಲಿಗ್ರಾಮದ ಪೂಜೆಯಿಂದ ಸುಖವು ಲಭಿಸುವದು.

*ದಾಮೋದರ ಸಾಲಿಗ್ರಾಮ :*

ಸ್ಥೂಲೋದಾಮೋದರೋಜ್ಞೇಯಃ। ಸೂಕ್ಷ್ಮರಂಧ್ರೋಭವೇತ್ತುಸಃ॥
ವರ್ತುಳಸ್ನಿಗ್ಧಮೂರ್ತಿಶ್ಚ। ಸದಾರೇಖಾತುದಕ್ಷಿಣೇ॥

ಉರುಟಾಗಿ ಉಬ್ಬಿದ ಸಾಲಿಗ್ರಾಮದಲ್ಲಿ ಸೂಕ್ಷ್ಮ ತೂತುಗಳಿದ್ದು, ಬಲಬದಿಯಲ್ಲಿ ರೇಖೆಗಳಿದ್ದರೆ ಅದನ್ನು ಕೋಮಲವಾದ ದಾಮೋದರ ಮೂರ್ತಿ ಎಂದೆನ್ನುವರು.

*ವಾಸುದೇವ ಸಾಲಿಗ್ರಾಮ :*

ಪರಾಸ್ಥಿತೇ ಸಮೇಚಕ್ರೇ। ದೃಶ್ಯತೇನಾಂತರೀಯಕೇ॥
ವಾಸುದೇವಸ್ಸವಿಖ್ಯಾತಃ। ಶುಕ್ಲಾಭಶ್ಚಾತಿ ಶೋಭನಃ॥

ದಾಸುದೇವೋ ವಿಪ್ರಜನ್ಮೈ । ರುಪಾಸ್ಯಃ ಪೂಜನೇಸದಾ ॥

ಸಾಲಿಗ್ರಾಮದ ಕೆಳಗಿನ ಭಾಗದಲ್ಲಿ ಸರಿಯಾದ ಒಂದು ಚಕ್ರವಿದ್ದು ಇನ್ನು ಬೇರೆ ಚಕ್ರಗಳಿಲ್ಲದೆ ಹೆಚ್ಚು ಶೋಭಿಸುತ್ತಿದ್ದರೆ ಅದನ್ನು ವಾಸುದೇವ ಸಾಲಿಗ್ರಾಮ ಎಂದೆನ್ನುವರು. ಇದನ್ನು ಬ್ರಾಹ್ಮಣರು ಮಾತ್ರ ಪೂಜಿಸ ಬೇಕು.

*ಪ್ರದ್ಯುಮ್ನ ಸಾಲಿಗ್ರಾಮ :*

ಪ್ರದ್ಯುಮ್ನಃ ಸೂಕ್ಷ್ಮ ಚಕ್ರಸ್ತು । ನೀಲದೀಪ್ತಸ್ತಥೈವಚ ॥
ಮಕರಾಭಾಭವೇದ್ರೇಖಾ । ಪಾರ್ಶ್ವತಃ ಪೃಷ್ಠತೋಪಿವಾ ॥

ನೀಲ ಬಣ್ಣದಿಂದ ಯುಕ್ತವಾಗಿದ್ದು, ಸೂಕ್ಷ್ಮವಾದ ಚಕ್ರಗಳು ಬೆನ್ನಿನಲ್ಲಾಗಲೀ ಅಥವಾ ಬದಿಯಲ್ಲಾಗಲೀ ಮೊಸಳೆಯನ್ನು ಹೋಲುವಂತಹ ರೇಖೆಗಳಿದ್ದರೆ ಅದನ್ನು ಪ್ರದ್ಯುಮ್ನ ಸಾಲಿಗ್ರಾಮವೆಂದು ಹೇಳುವರು.

*ಸಂಕರ್ಷಣ ಸಾಲಿಗ್ರಾಮ :*

ಸಂಕರ್ಷಣೇಕ್ಷತ್ರಿಯೈಶ್ಚ । ಪ್ರದ್ಯುಮ್ನೋವೈಶ್ಯಕೈರಪಿ ॥
ಅನಿರುದ್ಧಸ್ತು ಶೂದ್ರೈಶ್ಚ । ಪೂಜ್ಯಃ ಸರ್ವವರಪ್ರದಃ ॥

ಭೂಪಾಲಕರೆನಿಸಿದ ಕ್ಷತ್ರಿಯರು ಸಂಕರ್ಷಣ ಮೂರ್ತಿಯನ್ನು, ವೈಶ್ಯರು ಪ್ರದ್ಯುಮ್ನ ಮೂರ್ತಿಯನ್ನು ಪೂಜಿಸಬೇಕು. ಅವರವರ ಜೀವನಕ್ಕೆ ಸಂಬಂಧಿಸಿದಂತೆ ಆ ಆ ಸಾಲಿಗ್ರಾಮಗಳನ್ನು ಪೂಜಿಸಿದಲ್ಲಿ ಅವರಿಗೆಲ್ಲ ಕಲ್ಯಾಣವಾಗುವದೆಂಬ ಮಾತನ್ನು ಜ್ಞಾನಿಗಳು ತಿಳಿಸುತ್ತಾರೆ.

*ಅನಿರುದ್ಧ ಸಾಲಿಗ್ರಾಮ :*

ಅನಿರುದ್ಧಸ್ತುಪೀತಾಭೋ । ವರ್ತುಳಶ್ಚಾತಿ ಶೋಭನಃ ॥
ರೇಖಾತ್ರಯಂತುತದ್ವಾರೇ ।ದೃಶ್ಯಂಪದ್ಮೇನಲಾಂಛಿತಃ ॥

ಅರಿಶಿಣ ಬಣ್ಣದಿಂದ ಹೊಳೆಯುವಂತಹ ಉರುಟಾದ ಸಾಲಿಗ್ರಾಮದ ದ್ವಾರದ ಸಮೀಪ ಮೂರು ರೇಖೆ ಹಾಗೂ ಪದ್ಮದ ಚಿಹ್ನೆಗಳಿದ್ದರೆ ಅದನ್ನು ಅನಿರುದ್ಧ ಎಂದು ಗುರುತಿಸುವರು.

*ಪುರುಷೋತ್ತಮ ಸಾಲಿಗ್ರಾಮ :*

ಮಧ್ಯಚಕ್ರ : ಸುವರ್ಣಶ್ಚ । ಮಸ್ತಕೇಪೃಥುಚಕ್ರಕಃ ॥
ಪುರುಷೋತ್ತಮ ದೇವಸ್ತು । ಪೂಜಕಸ್ಯಶುಭಪ್ರದಃ ॥

ಪಲ್ಲಕ್ಕಿಯ ಆಕಾರ, ಮಧ್ಯದಲ್ಲಿ ಚಕ್ರ ತಲೆಯಲ್ಲಿ ಸುವರ್ಣರೇಖೆ ಇದ್ದರೆ ಅಂಥದನ್ನು ಪುರುಷೋತ್ತಮ ಸಾಲಿಗ್ರಾಮ ಎಂದೆನ್ನುವರು. ಅದನ್ನು ಪೂಜಿಸಿದಲ್ಲಿ ಒಳ್ಳೆ ಫಲಗಳು ದೊರೆಯುವವು.

*ಅಧೋಕ್ಷಜ ಹಾಗೂ ಅಚ್ಯುತ ಸಾಲಿಗ್ರಾಮ :*

ಅತಿಕೃಷ್ಣೋರಕ್ತರೇಖಾ । ವೃತ್ತಮೂರ್ತಿಃ ಸುಚಕ್ರಃ ॥
ಕಿಂಚಿತ್ಕಪಿಲಸಂಯುಕ್ತಃ । ಸೂಕ್ಷ್ಮೋವಾಸ್ಥೂಲದೀವವಾ ॥

ಅಧೋಕ್ಷಜಇತಿಖ್ಯಾತೋ । ಹ್ಯರ್ಚಿತಃ ಸುಖದಸ್ತಥಾ ॥
ನವಚಕ್ರೋಽಚ್ಯುತಃಶ್ರೇಯಃ । ಸರ್ವಕಾಮಶುಭಪ್ರದಃ ॥

ಇದು ಗಾತ್ರದಲ್ಲಿ ದೊಡ್ಡದಿದ್ದು ಸ್ವಲ್ಪ ಕಂದು ಬಣ್ಣ ಅತೀ ಕಪ್ಪು ಕೆಂಪಿನ ರೇಖೆ, ಒಳ್ಳೆ ಚಕ್ರವಿದ್ದರೆ ಅದಕ್ಕೆ ಅಧೋಕ್ಷಜ ಸಾಲಿಗ್ರಾಮ ಎಂಬ ಹೆಸರು. ಅದೇ ಸಾಲಿಗ್ರಾಮದಲ್ಲಿ ಮೂರಾಗಲಿ ಅಥವಾ ಒಂಬತ್ತಾಗಲೀ ಚಕ್ರಗಳಿದ್ದರೆ ಅದು ಸಕಲ ಇಷ್ಟಾರ್ಥಗಳನ್ನು ಪೂರೈಸುವಂತಹದು.

*ಅಚ್ಯುತ ಸಾಲಿಗ್ರಾಮ :*

ಚತುರ್ವರ್ಕೋಷ್ಟಚಕ್ರಸ್ತು । ವಾಮದಕ್ಷಿಣಪಾರ್ಶ್ವಯೋಃ ॥
ಅಭೀಷ್ಟದೋಮುಖೇಷ್ಯೇವಂ । ಕುಂಡಲದ್ವಯಶೋಭಿತಃ ॥

ಶಂಖಚಕ್ರಗದಾಶಾರ್ಙ್ಗ । ಬಾಣನಂದಕಭೂಷಿತಃ ॥
ಮುಸಲಂಚಹಲಂಭಿಭ್ರತ್ । ಧ್ವಜವಜ್ರಾಂಕುಶೈರ್ಯುತಃ ॥

ಸೋಚ್ಯುತಃ ಕಥಿತೋನ್ಯೃಣಾಂ । ದುರ್ಲಭಸ್ತಪಸಾವಿನಾ ॥

ನಾಲ್ಕು ಮುಖವುಳ್ಳದ್ದು, ಎಡಬಲಗಳಲ್ಲಿ ನಾಲ್ಕು ಚಕ್ರಗಳು, ಮುಖದಲ್ಲಿ ಒಂದು ಚಕ್ರವಿದ್ದಲ್ಲಿ ಅಂಥ ಸಾಲಿಗ್ರಾಮವನ್ನು ಅಚ್ಯುತ ಎಂದೆನ್ನುವರು. ಒಂದು ವೇಳೆ ಶಂಖ, ಚಕ್ರ, ಗದೆ, ಬಿಲ್ಲು, ಮುಸಲ, ನೇಗಿಲುಗಳ ಚಿಹ್ನೆಗಳು ಕಾಣುತ್ತಿದ್ದರೆ, ಕರ್ಣಕುಂಡಲಗಳಿಂದ ಕೂಡಿದ್ದರೆ ಇಂಥ ಸಾಲಿಗ್ರಾಮವು ಕೇವಲ ತಪಸ್ಸಿನಿಂದ ಮಾತ್ರ ಪಡೆಯಬಹುದು.

*ಜನಾರ್ಧನ ಸಾಲಿಗ್ರಾಮ :*

ಪೂರ್ವಭಾಗೈಕ ವದನಃ । ಪಶ್ಚಾದೇಕಾಸ್ಯಸಂಯುತಃ ॥
ಜನಾರ್ಧನಶ್ಚತುಶ್ಚಕ್ರೀ । ಶ್ರೀ ಪ್ರದೋರಿಪುನಾಶನಃ ॥

ಮುಂಭಾಗದಲ್ಲಿಯೂ ಹಾಗೂ ಹಿಂಭಾಗದಲ್ಲಿಯೂ ಮುಖವಿದ್ದು ನಾಲ್ಕು ಚಕ್ರಗಳು ಕಂಡಲ್ಲಿ ಅದು ಶತ್ರುವನ್ನು ನಾಶಪಡಿಸುವ ಜನಾರ್ಧನ ಸಾಲಿಗ್ರಾಮವೆಂದು ತಿಳಿಯಬೇಕು.

*ಉಪೇಂದ್ರ ಸಾಲಿಗ್ರಾಮ :*

ಉಪೇಂದ್ರ ಇಂದ್ರ ನೀಲಾಭಃ । ಸೂಕ್ಷ್ಮಚಕ್ರಸ್ತು ಶೋಭನಃ ॥

ಇಂದ್ರ ನೀಲಮಣಿಯಂತೆ ಶೋಭಿಸುವ ಈ ಸಾಲಿಗ್ರಾಮದಲ್ಲಿ ಸೂಕ್ಷ್ಮಚಕ್ರವಿರುತ್ತದೆ.

*ಹರಿಮೂರ್ತಿ ಸಾಲಿಗ್ರಾಮ :*

ವನಮಾಲಾಪರಿವೃತಃವಾಮಪಾರ್ಶ್ವೇ ದ್ವಿಚಕ್ರಕಃ ॥
ಅಲ್ಪದ್ವಾರಯುತಾಷ್ಣಿಗ್ಧಾ । ಹರಿಮೂರ್ತಿರುದಾಹೃತಾ ॥

ಕೋಮಲವಾದ ಈ ಸಾಲಿಗ್ರಾಮದಲ್ಲಿ ಚಿಕ್ಕ ದ್ವಾರ ನವಮಾಲಾಕಾರದ ರೇಖೆ ಹಾಗೂ ಎರಡು ಚಕ್ರಗಳಿರುತ್ತವೆ.

*ಶ್ಯಾಮಮೂರ್ತಿ ಸಾಲಿಗ್ರಾಮ :*

ಶ್ಯಾಮಾಜಂಬುಫಲಸಮಾ। ಚಿಹ್ನಿತಾವನಮಾಲಯಾ ॥
ಜಂಬ್ವಾಮಲಕತುಲ್ಯಾಯಾ। ಸೂಕ್ಷ್ಮಚಕ್ರದ್ವಯಾನ್ವಿತಾ ॥

ತಸ್ಯಾಮೇವಸದಾಕಾಲಂ। ಶ್ರೀಯಾಸಹಹರಿಃಸ್ಥಿತಃ ॥

ಇದು ಜಂಬೂನೇರಳೇ ಹಣ್ಣಿನ ಗಾತ್ರ ಅಥವಾ ನೆಲ್ಲಿಕಾಯಿಯ ಗಾತ್ರದ್ದಾಗಿದ್ದು ಎರಡು ಚಕ್ರಗಳು ವನಮಾಲಾಕಾರದ ರೇಖೆಗಳು ಇದ್ದರೆ ಅಂಥ ಸಾಲಿಗ್ರಾಮದಲ್ಲಿ ಶ್ರೀಹರಿಯು ಲಕ್ಷ್ಮೀಸಹಿತ ವಾಸವಾಗಿರುವನೆಂದು ಹೇಳುತ್ತಾರೆ. ಇದು ಕಲ್ಯಾಣಕಾರಕವಾದುದು

*ಹಯಗ್ರೀವ ಸಾಲಿಗ್ರಾಮ :*

ಹಯಗ್ರೀವಮಿತಿಖ್ಯಾತಂ। ಮಹಾಸಾರಸ್ವತಪ್ರದಮ್ ॥
ಹಯಗ್ರೀವೋಪಿಭಗವಾನ್। ರತ್ನಪೀತಾದಿ ಮಿಶ್ರಿತಃ ॥

ಚಿಕ್ಕದಾಗಿದ್ದು ಕುದುರೆಯ ಮುಖವನ್ನು ಹೋಲುತ್ತಿದ್ದರೆ, ಕಪ್ಪಗೆ ಅಥವಾ ಅರಿಶಿಣ ಮಿಶ್ರಿತ ಬಣ್ಣವಿದ್ದರೆ ಅಂಥ ಸಾಲಿಗ್ರಾಮವನ್ನು ಹಯಗ್ರೀವ ಸಾಲಿಗ್ರಾಮವೆಂದು ಗುರುತಿಸಲಾಗುವದು. ಇದನ್ನು ಪೂಜಿಸುವುದರಿಂದ ಅವರು ಬಹುದೊಡ್ಡ ವಿದ್ವಾಂಸರಾಗುತ್ತಾರೆಂಬ ನಂಬಿಕೆಯು ಇದೆ.

*ತಾರ್ಕ್ಷ ಸಾಲಿಗ್ರಾಮ :*

ಅಂಕುಶಾಕೃತಿಸ್ತಾರ್ಕ್ಷ್ಯ। ಶ್ಚಕ್ರದ್ವಯಸಮನ್ವಿತಃ ॥
ಪಂಚಬಾದ ಸಮೋಪೇತ। ಪರವಿದ್ಯಾಪ್ರದೋನ್ಯಣಾಂ ॥

ಅಂಕುಶದಂತೆ ಆಕಾರವಿದ್ದು ಎರಡು ಚಕ್ರ, ಐದು ಬಿಂದುಗಳಿಂದ

ಕೂಡಿದ ಈ ಸಾಲಿಗ್ರಾಮವನ್ನು ಪೂಜಿಸುವದರಿಂದ ವೇದಾಂತ ವಿದ್ಯಾ ಪ್ರವೀಣರಾಗುತ್ತಾರೆಂಬ ನಂಬಿಕೆ ಇದೆ.

*ಯಜ್ಞ ಮೂರ್ತಿ ಸಾಲಿಗ್ರಾಮ :*

ಯಜ್ಞಮೂರ್ತಿಸ್ತು ಭಗವಾನ್। ವೃತ್ತಃ ಪೀತಾದಿ ಮಿಶ್ರಿತಃ॥
ದ್ವಾರಸ್ಯವಾಮತ ಶ್ಚಕ್ರಂ। ದಕ್ಷಿಣೇಸ್ರುಕ್ ಸ್ರುವೌತಥಾ॥

ಮಿಶ್ರವರ್ಣಗಳಿಂದ ಕೂಡಿದ್ದು, ಉರುಟಾಗಿದ್ದು, ದ್ವಾರದ ಎಡಬಲಗಳಲ್ಲಿ ಹೋಮಕಾಲದಲ್ಲಿ ಬಳಸುವ ಸ್ರುಕ್ ಹಾಗೂ ಹಾಗೂ ಸ್ರುವ ಇವುಗಳ ಗುರುತು ಕಾಣುತ್ತಿದ್ದರೆ ಭಗವಂತನಾದ ಯಜ್ಞಮೂರ್ತಿಯ ಸಾಲಿಗ್ರಾಮವೆಂದು ತಿಳಿಯಬೇಕು.

*ದತ್ತಾತ್ರೇಯ ಸಾಲಿಗ್ರಾಮ :*

ಪೀತಾರುಣೋಯಸಿತಾಭಸ್ತ್ವ। ಹ್ರಸ್ವ ಪೃಷ್ಠೋನ್ನತೋಭವೇತ್॥
ಅಕ್ಷಮಾಲಾಕೃತಿಃ ಪೃಷ್ಠೇ। ದತ್ತಾತ್ರೇಯಃ ಶುಭಃ ಪ್ರದಃ॥

ಅರಿಶಿಣ ಕೆಂಪು ಬಿಳಿ ಬಣ್ಣಗಳಲ್ಲಿ ಚಿಕ್ಕದಾಗಿದ್ದು, ನೆಲ್ಲಿಕಾಯಿಯಂತಹ ಗುರುತುಗಳಿದ್ದಲ್ಲಿ, ಅದನ್ನು ದತ್ತಾತ್ರೇಯ ಸಾಲಿಗ್ರಾಮ ಎಂದು ಗುರುತಿಸುವರು. ಇದು ಒಳ್ಳೇ ಫಲವನ್ನೀಯುವದು.

*ಶಿಂಶುಮಾರ ಸಾಲಿಗ್ರಾಮ :*

ಶಿಂಶುಮಾರೋದೀರ್ಘಕಾಯಃ। ಬಲಶಾಯ್ಯತಿಗಹ್ವರಃ।
ಉನ್ನತಃ ಪೃಷ್ಠಬಾಗೇಚ। ಚಕ್ರೇಣೈತೇನ ಸಂಯುತಃ॥

ಆಕಾರದಲ್ಲಿ ಉದ್ದವಾಗಿದ್ದು, ಚಿಕ್ಕದಾದ ಗುಹೆಯಲ್ಲಿ ಒಂದು ಚಕ್ರವಿದ್ದು, ಅದರ ಮೇಲ್ಭಾಗವು ಸ್ವಲ್ಪ ಎತ್ತರವಾಗಿದ್ದಲ್ಲಿ ಅದನ್ನು ಶಿಂಶುಮಾರಮೂರ್ತಿ ಸಾಲಿಗ್ರಾಮ ಎಂದೆನ್ನುವರು.

*ಷಣ್ಮುಖ ಸಾಲಿಗ್ರಾಮ :*

ಷಣ್ಮುಖೇನ ಮುಕುಂದಾಖ್ಯಃ। ಸತಾಂಮುಕ್ತಿ ಪ್ರದಾಯಕಃ॥
ದೀರ್ಘಾಕಾರಃ ಶ್ಯಾಮವರ್ಣಃ। ಸ್ವರ್ಣಬಿಂದು ಸಮನ್ವಿತಃ॥

ಕಪ್ಪುವರ್ಣ, ಆರುಮುಖ, ಪ್ರತಿಯೊಂದರಲ್ಲಿಯೂ ಸ್ವರ್ಣ ಬಿಂದುವಿದ್ದಲ್ಲಿ ಅಂಥ ಸಾಲಿಗ್ರಾಮವು ಸಜ್ಜನರಿಗೆ ಮುಕ್ತಿಯನ್ನೀಯುವಂಥದಾಗಿದೆ.

*ಹಂಸಮೂರ್ತಿ ಸಾಲಿಗ್ರಾಮ:*

ಹಂಸಸ್ತು ಧನುರಾಕಾರೋ। ನೀಲಶ್ವೇತವಿಮಿಶ್ರಿತಃ॥
ಚಕ್ರಪದ್ಮಸಮೋಪೇತೋ। ಜ್ಞಾನಮೋಕ್ಷಪ್ರದಾಯಕಃ॥

ನೀಲ ಹಾಗೂ ಶುಭ್ರ ಮಿಶ್ರಿತವಿದ್ದು ಬಿಲ್ಲಿನಾಕಾರದಲ್ಲಿ ತಾವರೆಯ ಹೂ ಹಾಗೂ ಚಕ್ರಗಳ ಗುರುತಿರುವ ಈ ಸಾಲಿಗ್ರಾಮವು ಮೋಕ್ಷದಾಯಕ ಹಂಸಮೂರ್ತಿ ಸಾಲಿಗ್ರಾಮ ಎಂದೆನಿಸುವುದು.

*ಪರಮಹಂಸ ಖಗೇಶ ಸಾಲಿಗ್ರಾಮ:*

ಪರಮಹಂಸಃ ಖಗೇಶಾನ। ಶಿಖಂಡಿಗಳಸನ್ನಿಭಃ॥
ಸ್ನಿಗ್ಧಆಯುತವೃತ್ತಶ್ಚ। ವರ್ತುಳಾಪ್ರಮನ್ನಿಸಃ॥

ಮಧ್ಯಚಕ್ರ ಸಮೋಪೇತೋ। ಭಾನೋರ್ವಳಯ ಸಂಯುತಃ॥
ವರ್ತುಳಾಕೃತಿಕಾರೇಖಾ। ವಾಮಭಾಗೇಪ್ರದೃಶ್ಯತೇ॥

ಮೊಟ್ಟೆಯಾಕಾರದ ಕೋಮಲ ಉರುಟು ಮುಖ, ನೀಲಕಂಠ, ಒಂದು ಚಕ್ರ, ಎಡಬದಿಗಳಲ್ಲಿ ಸೂರ್ಯಬಿಂಬವನ್ನು ಹೋಲುವ ರೇಖೆ ಕಾಣುತ್ತಿದ್ದಲ್ಲಿ ಅದನ್ನು ಪರಮಹಂಸ ಅಥವಾ ಖಗೇಶ ಎಂಬ ಹೆಸರಿನಿಂದ ಕರೆಯಲಾಗಿದೆ.

*ಪರಮಹಂಸ ಸಾಲಿಗ್ರಾಮ :*

ಮೂರ್ತಿಃ ಪರಮಹಂಸಾಖ್ಯಾ । ಚತುರ್ವರ್ಗ ಫಲಪ್ರದಾ ॥
ವೈಕುಂಠೋಮಣಿವರ್ಣಾಭೋ । ವಾಮಪಾರ್ಶ್ವೇಕಚಕ್ರಕಃ ॥

ದ್ವಾರೋಪರಿಶಾಥಾರೇಖಾ । ಪದ್ಮಾಕಾರಾಸುಶೋಭನಾ ॥
ಪಾರ್ಶ್ವೇವಾಮೂರ್ಧ್ನಿವಾಪೃಷ್ಠೇ । ನಯನದ್ವಯಶೋಭಿತಾ ॥

ಈ ಸಾಲಿಗ್ರಾಮದ ತಲೆಯಲ್ಲಾಗಲೀ ಅಥವಾ ಬೆನ್ನಿನಲ್ಲಾಗಲೀ ಎರಡು ಕಣ್ಣುಗಳ ಗುರುತು, ದ್ವಾರದ ಮೇಲೆ ತಾವರೇ ಹೂವಿನ ರೇಖೆ, ಎಡಬದಿಯಲ್ಲಿ ಚಕ್ರವಿದ್ದಲ್ಲಿ,ಧರ್ಮ, ಅರ್ಥ, ಕಾಮ ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥವನ್ನೀಯುವ ವೈಕುಂಠ ವಾಸಿಯಾದ ಪರಮಹಂಸ ಮೂರ್ತಿ ಸಾಲಿಗ್ರಾಮ ಎಂದು ತಿಳಿಯಬೇಕು.

*ಪುಂಡರೀಕ ಸಾಲಿಗ್ರಾಮ :*

ಪುಂಡರೀಕಾಕ್ಷಮೂರ್ತಿಃ ಸ್ಯಾತ್ । ಸರ್ವಲೋಕವಶಂಕರೀ ॥
ಮುಖೇವಾಪಾರ್ಶ್ವತೋವಾಪಿ । ಮಯೂರಗಳಸನ್ನಿಭಾ ॥

ಈ ಸಾಲಿಗ್ರಾಮದ ಮುಖದಲ್ಲಾಗಲಿ ಅಥವಾ ಎಡಬದಿಗಳಲ್ಲಾಗಲೀ ನವಿಲಿನ ಕೊರಳಿನಲ್ಲಿರುವಂತಹ ಬಣ್ಣವು ಕಾಣುತ್ತಿದ್ದರೆ ಅದು ಸರ್ವಲೋಕಗಳನ್ನು ವಶಪಡಿಸಿಕೊಳ್ಳುವ ಪುಂಡರೀಕಾಕ್ಷ ಮೂರ್ತಿ ಎಂದು ತಿಳಿಯಬೇಕು.

*ಲಕ್ಷ್ಮೀಪತಿ ಸಾಲಿಗ್ರಾಮ :*

ಕೃಷ್ಣವರ್ಣಃ ಸೂಕ್ಷ್ಮಚಕ್ರ । ಪೃಥುಲಾಸ್ಯ ಸಮನಿತಃ ॥
ಲಕ್ಷ್ಮೀಪತಿಸ್ತಥಾಸ್ರಗ್ವೀ । ಲಕ್ಷ್ಮೀಸಂಪತ್ಪ್ರದಾಯಕಃ ॥

ಕಪ್ಪು ವರ್ಣ, ಸೂಕ್ಷ್ಮವಾದ ಚಕ್ರಗಳ ದೊಡ್ಡ ಗುರುತುಗಳಿದ್ದಲ್ಲಿ ಅದನ್ನು

ಲಕ್ಷ್ಮೀಪತಿ ಸಾಲಿಗ್ರಾಮವೆಂದು ಹೇಳುವರು. ಈ ಸಾಲಿಗ್ರಾಮ ಪೂಜಿಸುವದರಿಂದ ಸಂಪತ್ತನ್ನು ಅನುಗ್ರಹಿಸುವಂತಹದು.

*ಪುರಾಣ ಪುರುಷೋತ್ತಮ ಸಾಲಿಗ್ರಾಮ :*

ದೂರ್ವಾಭಃಸೂಕ್ಷ್ಮವದನ। ಪೀತರೇಖಿಃಸುಸೂಕ್ಷ್ಮಕಃ ॥
ಸದೇವದೇವೋವಿಜ್ಞೇಯಃ। ಪುರಾಣಪುರುಷೋತ್ತಮಃ ॥

ಗರಿಕೆ ಹುಲ್ಲಿನಂತಹ ರೇಖೆ, ಅರಿಶಿಣ ಬಣ್ಣ, ಚಿಕ್ಕ ಬಾಯಿ, ಸೂಕ್ಷ್ಮ ಚಕ್ರಗಳಿದ್ದಲ್ಲಿ ಅದನ್ನು ಪುರಾಣ ಪುರುಷೋತ್ತಮ ಮೂರ್ತಿ ಎಂದು ಗುರುತಿಸಿರುವರು.

*ವಟಪತ್ರಶಾಹಿ ಸಾಲಿಗ್ರಾಮ :*

ವಟಪತ್ರಶಯೋದೇವೋ। ವರ್ತುಳಾಸ್ಯೋತಿ ಶೋಭನಃ ॥
ಕ್ಷೀರಬುದ್ಬುದವತ್ತಾರ್ಕ್ಷ್ಯ। ನೀಲಶ್ವೇತಪ್ರಭಃಸ್ತಥಾ ॥

ವಕ್ರಸ್ಯವಾಮತ ಶಂಖಂ। ದಕ್ಷಿಣೇಪದ್ಮಮೇವಚ ॥
ಏಕಚಕ್ರೇಹ್ಯದಶ್ಚೋರ್ಧ್ವಂ। ದ್ವಿದಿವಚಕ್ರಸ್ತ್ರೀಬಿಂದುತಃ ॥

ಹಾಲಿನ ನೊರೆಯಂತೆ ತೋರುವ ನೀಲ ಹಾಗೂ ಶುಭ್ರವಾದ ಹಾಗೂ ಉರುಟಾಗಿ ತೋರುವ ಮುಖದ ಎಡಭಾಗದಲ್ಲಿ ಶಂಖ ಹಾಗೂ ಬಲಭಾಗಕ್ಕೆ ಪದ್ಮ ಹಾಗೂ ಒಂದು ಚಕ್ರ ಮೇಲೆರಡು ಬೇರೆ ಚಕ್ರಗಳಿದ್ದು, ಮೂರು ಬಿಂದುಗಳಿಂದ ಕೂಡಿದ್ದು, ಹೆಚ್ಚು ಕಾಂತಿಯುಕ್ತವಾಗಿದ್ದಲ್ಲಿ ಆ ಸಾಲಿಗ್ರಾಮವನ್ನು ವಟಪತ್ರಶಾಹಿ ಸಾಲಿಗ್ರಾಮವೆಂದು ಗುರುತಿಸುವರು. ಈ ಸಾಲಿಗ್ರಾಮವು ಸಿಗುವದು ಬಹು ಅಪರೂಪವೆಂದು ಹೇಳಿರುವರು

*ನಾಭಿಕಮಲ ವಿಷ್ಣು ಸಾಲಿಗ್ರಾಮ :*

ಚಕ್ರೇಣರಾವಾದ್ವಿವಿಂಶತ್ಯಾ। ಪುತ್ರೋವಿಶ್ವಂಬರಸ್ಮೃತ ॥
ಪಂಚವಕ್ತ್ರಸ್ಥೂಲತರಂ। ಪುರುಷಂಬಹುಚಕ್ರಕಮ್ ॥



ಶ್ರೀದೇವಿ, ಭೂದೇವಿ ಶ್ರೀನಿವಾಸನ ಸನ್ನಿಧಿಯಲ್ಲಿ.
ಗ್ರಂಥದಲ್ಲಿ ಸಂಗ್ರಹಿಸಲಾದ ಸಾಲಿಗ್ರಾಮಗಳ ಮಾದರಿಗಳು.



ತಿರುಮಲಾಧೀಶನ ಸನ್ನಿಧಿಯಲ್ಲಿರುವ ಅಪರೂಪದ ಶಂಖ ಹಾಗೂ ಬಲಮುರಿ ಶಂಖಗಳು.



1) ಧನಸ್ಸು



ಪರಶು



ಧ್ವಜ





ನೇಗಿಲು





ಕುಂಭ





ಛತ್ರ



ಮುಸಲ



ಮತ್ಸ್ಯ



ಖಡ್ಗ



ಅಕ್ಷಮಾಲಾ

ಸಾಲಿಗ್ರಾಮಗಳಲ್ಲಿ ಕಾಣಸಿಗುವ ಚಿಹ್ನೆಗಳು



ಶ್ರೀದೇವಿ, ಭೂದೇವಿ ಶ್ರೀನಿವಾಸನ ಸನ್ನಿಧಿಯಲ್ಲಿ.
ಗ್ರಂಥದಲ್ಲಿ ಸಂಗ್ರಹಿಸಲಾದ ಸಾಲಿಗ್ರಾಮಗಳ ಮಾದರಿಗಳು.



ರುಮಲಾಧೀಶನ ಸನ್ನಿಧಿಯಲ್ಲಿರುವ ಅಪರೂಪದ ಶಂಖ ಹಾಗೂ ಬಲಮುರಿ ಶಂಖಗಳು.
























<u>ಸಾಲಿಗ್ರಾಮಗಳಲ್ಲಿ ಕಾಣಸಿಗುವ ಚಿಹ್ನೆಗಳು</u>

ಐದು ಮುಖ ಹಾಗೂ ಇಪ್ಪತ್ತೆರಡು ಚಕ್ರಗಳು, ಒಂದು ವೇಳೆ ಅದಕ್ಕೂ ಹೆಚ್ಚಾಗಿದ್ದರೂ ಸಹ ಅಂಥ ಸಾಲಿಗ್ರಾಮವನ್ನು ನಾಭಿಕಮಲವನ್ನು ಹೊಂದಿದ ವಿಷ್ಣುಮೂರ್ತಿ ಎಂದು ಭಾವಿಸಲಾಗುವದು.

*ಅಮೃತಾಪಹರಣ ಸಾಲಿಗ್ರಾಮ :*

ಅಮೃತಾಪಹರಣೋದೇವೋ। ನೀಲೋತ್ಪಲಸಮಪ್ರಭ॥
ವರ್ತುಳೋಹ್ರಸ್ವವದನೋ। ಮಧ್ಯಚಕ್ರೋತಿ ಶೋಭನಃ॥

ಚಿಕ್ಕ ಮುಖ ಅದರಲ್ಲಿ ಒಂದು ಚಕ್ರ, ನೈದಿಲೆಯ ಹೂವಂತೆ ಕಾಂತಿಯುಕ್ತವಾದದ್ದು, ಸ್ವಲ್ಪ ಉರುಟಾಗಿರುವದೂ ಉಂಟು. ಅಂಥದನ್ನು ಸಮುದ್ರ ಮಂಥನ ಕಾಲದಲ್ಲಿ ದೇವತೆಗಳಿಗೆ ಅಮೃತಪ್ರಾಶನ ಮಾಡಿಸಿದ ಶ್ರೀಮನ್ನಾರಾಯಣನ ಪ್ರತಿರೂಪವೆಂದು ಭಾವಿಸಬೇಕು. ಇದನ್ನು ಪೂಜಿಸಿದಲ್ಲಿ ಸತ್‌ಚಿದಾನಂದವು ಲಭಿಸುವದು.

*ವಿಶ್ವರೂಪ ಸಾಲಿಗ್ರಾಮ :*

ವಿಶ್ವರೂಪಮನಂತವಾ। ಪುತ್ರಪೌತ್ರಾದಿವೃದ್ಧಿದಮ್॥
ಸ್ವರ್ಣಬಿಂದುಶಿರಾಸೌಮ್ಯ। ವರ್ತುಳಃ ಸ್ನಿಗ್ದಕೇಸರ॥

ವೃತ್ತಾಕಾರವಿದ್ದು ಸುವರ್ಣ ಬಿಂದುವಿನೊಂದಿಗೆ ಕೋಮಲ ಕುಸುಮಗಳನ್ನು ಹೋಲುವಂತಹ ರೇಖೆಗಳಿದ್ದಲ್ಲಿ ಅದನ್ನು ವಿಶ್ವರೂಪಧಾರಿಯಾದ ಅನಂತಮೂರ್ತಿ ಎಂದು ತಿಳಿಯಬೇಕಾಗಿ ಹೇಳಿರುವರು.

*ಚಕ್ರಪಾಣಿ ಸಾಲಿಗ್ರಾಮ :*

ಪೂರ್ವಭಾಗೇತ್ರಿವದನಃ। ಪಶ್ಚಾದೇಕಾಸ್ತಸಂಯುತಃ॥
ಅಷ್ಟಚಕ್ರಶ್ಚಕ್ರಪಾಣಿ। ಶ್ಚಕ್ರವರ್ತಿತ್ವದಾಯಕಃ॥

ಸನ್ಮುಖದಲ್ಲಿ ಮೂರು ಮುಖಗಳು, ಅದೇ ರೀತಿ ಹಿಂಬದಿಯಲ್ಲಿ

ಒಂದು ಮುಖ, ಎಂಟು ಚಕ್ರಗಳಿಂದ ಕೂಡಿದ್ದರೆ ಅಂಥದನ್ನು ಚಕ್ರಪಾಣಿ ಎಂದೆನ್ನುವರು. ಈ ಸಾಲಿಗ್ರಾಮವನ್ನು ಪೂಜಿಸಿದಲ್ಲಿ ಚಕ್ರವರ್ತಿಯಾಗುವ ಯೋಗ ಪ್ರಾಪ್ತಿಯಾಗುವದೆಂಬ ಭಾವನೆ ಇರುವದು.

*ಸುದರ್ಶನ ಸಾಲಿಗ್ರಾಮ :*

ಏಕಚಕ್ರ: ಶಿರೋದೇಶೇ । ಶುಕ್ಲವರ್ಣಮುಖ ಸ್ತಥಾ ॥
ಸುದರ್ಶನ ಪ್ರವಿಜ್ಞೇಯಃ । ಸರ್ವಪಾಪಪ್ರಣಾಸನ ॥

ಮೇಲ್ಭಾಗದಲ್ಲಿ ಒಂದು ಚಕ್ರ, ಒಳ್ಳೇ ಮುಖವಿದ್ದಲ್ಲಿ ಅದನ್ನು ಸುದರ್ಶನವೆನ್ನುವರು. ಇದನ್ನು ಪೂಜಿಸಿದಲ್ಲಿ ಸಕಲ ಪಾಪ ವಿಮೋಚನೆ ಆಗುವದು.

*ನಾಗಭೋಗಮೂರ್ತಿ ಸಾಲಿಗ್ರಾಮ :*

ಅತ್ರಿತ್ರಯೋದಶಾಚ್ಚಕ್ರಾ । ದ್ವಾಶಚ್ಚಕ್ರಾವಧಿ ಸ್ಮೃತಾ ॥
ನಾನಾವರ್ಣಾನ್ಯನಂತಾಶ್ಚ । ನಾಗಭೋಗೇನ ಚಿಹ್ನಿತಃ ॥

ಈ ಸಾಲಿಗ್ರಾಮದಲ್ಲಿ ಹದಿಮೂರರಿಂದ ಇಪ್ಪತ್ತೆರಡರವರೆಗೆ ಚಕ್ರಗಳಿರುತ್ತವೆ. ನಾನಾತರಹದ ಬಣ್ಣಗಳು ಕಾಣುತ್ತಿದ್ದರೆ ಅದು ಸರ್ಪದ ಹೆಡೆ ಅಥವಾ ನಾಗಭೋಗ ಸಾಲಿಗ್ರಾಮವೆನ್ನುವರು.

*ಹರಿಹರ ಸಾಲಿಗ್ರಾಮ :*

ಶಿವನಾಭಯುತೋಮೂರ್ಧ್ನಿ । ಪೃಷ್ಠೇವಾದ್ವಿ ದ್ವಿಚಕ್ರಯುಕ್ ॥
ಯತ್ರದ್ಧರಿ ಹರಂವಿದ್ಯಾ । ತ್ಸುಖಸೌಭಾಗ್ಯದಾಯಕಮ್ ॥

ಚತುಶ್ಚಕ್ರೋಹರಿಹರೋ । ದ್ವಾರಸ್ಯೋರ್ಧ್ವಂತಥಾಪ್ರದ ॥
ವಿನಶ್ಯತಿಗೃಹಸ್ಥಸ್ಯ । ಕುಲಂಕ್ಷೇತ್ರಗೃಹಂಕ್ರಮಾತ್ ॥

ಈ ಸಾಲಿಗ್ರಾಮದ ಮಧ್ಯಭಾಗದಲ್ಲಿ ಶಿವನಾಭಿಯ ಗುರುತಿದ್ದು,

ತಲೆಯಲ್ಲಿ ಎರಡು ಚಕ್ರಗಳು, ಬೆನ್ನಿನ ಮೇಲೆ ಎರಡು ಚಕ್ರಗಳಿದ್ದರೆ ಅಂಥದು ಸೌಭಾಗ್ಯವನ್ನು ಕೊಡುವಂತಹದು. ಇನ್ನೊಂದು ಸಾಲಿಗ್ರಾಮದ ಮೇಲೆ ಕೆಳಗೆ ನಾಲ್ಕು ಚಕ್ರಗಳಿದ್ದರೆ ಅದನ್ನು ಹರಿಹರಮೂರ್ತಿ ಎನ್ನುವರು. ಈ ಸಾಲಿಗ್ರಾಮವನ್ನು ಪೂಜಿಸಬಾರದು. ಪೂಜಿಸಿದರೇ ಕುಲವೇ ನಾಶವಾಗುವದು.

*ಶಂಕರನಾರಾಯಣ ಸಾಲಿಗ್ರಾಮ :*

ಶಿವನಾಭಿಯುತಃ ಪಾರ್ಶ್ವೇ । ವಾಮೇವಾದಕ್ಷಿಣೇಪಿವಾ ॥
ಸಚಶಂಕರಪೂರ್ವಸ್ಯಾತ್ । ನಾರಾಯಣ ಇತೀ ರಿತಃ ॥

ಯುವಮಾತ್ರಂತುಗರ್ತಂಸ್ಯಾತ್ । ದ್ಯವಾರ್ಧಂತುಂಗಮೇವವಾ ॥
ಶಿವನಾಭ ಇತಿಖ್ಯಾತೋ । ಭುಕ್ತಿಮುಕ್ತಿ ಫಲಪ್ರದಃ ॥

ಈ ಸಾಲಿಗ್ರಾಮದ ಎಡಭಾಗದಲ್ಲಾಗಲೀ ಅಥವಾ ಬಲಭಾಗದಲ್ಲಾಗಲೀ ಶಿವನಾಭಿಯ ಗುರುತು ಕಾಣುತ್ತಿದ್ದರೆ ಅದನ್ನು ಶಂಕರನಾರಾಯಣ ಸಾಲಿಗ್ರಾಮವೆನ್ನುವರು. ಈ ಗುರುತುಗಳಿರುವದು ಬಹು ಮುಖ್ಯ. ಇದನ್ನು ಪೂಜಿಸಿದಲ್ಲಿ ಮುಕ್ತಿಯು ಲಭಿಸುವದು. ಶಿವನಾಭಿ ಎಂದರೆ ಇಡೀ ಸಾಲಿಗ್ರಾಮದಲ್ಲಿ ಗೋದಿ ಅಗಲದಷ್ಟು ತಗ್ಗಿರಬೇಕು. ಅದರ ಮಧ್ಯದಲ್ಲಿ ಅರ್ಧ ಗೋದಿ ಕಾಳಿನಷ್ಟು ಎತ್ತರವಾದ ಆಕೃತಿ ಇರಬೇಕು. ಅಂಥದನ್ನು ನಾಭಿಯ ಸಂಕೇತವೆಂದು ತಿಳಿಯಬೇಕು.

*ಸ್ವಯಂಭೂ ಸಾಲಿಗ್ರಾಮ :*

ಮೂರ್ಧ್ನಿವರ್ತುಳರೇಖಾಭಿ । ರಾವೃತೋನೀಲವರ್ಣವಾನ್ ॥
ದೀರ್ಘಾಸ್ಯಃ ಪೃಥುಚಕ್ರಶ್ಚ । ಸ್ವಯಂಭೂರಿತಿವಿಶ್ರುತ ॥

ನೀಲವರ್ಣದಿಂದ ಯುಕ್ತವಾದುದು, ತಲೆಯಲ್ಲಿ ಉರುಟಾದ ರೇಖೆ, ಉದ್ದಾದ ಬಾಯಿ, ದೊಡ್ಡ ಚಕ್ರದಿಂದ ಕೂಡಿದ್ದಾದರೆ ಅದನ್ನು ಸ್ವಯಂಭೂ ಎಂದೆನ್ನುವರು.

*ಸ್ವರ್ಣಗರ್ಭ ಸಾಲಿಗ್ರಾಮ :*

ಅಮುಖಿಃ ಸ್ವರ್ಣ ಬಿಂದ್ವಾಖ್ಯಃ। ಸ್ವರ್ಣಗರ್ಭಃ ಪ್ರಕೀರ್ತಿತಃ ॥
ವಜ್ರಕೀಟವಪುರ್ಜಿಷ್ಣುಃ। ತತ್ರೈವಾಂತರ್ಹಿತಸ್ಸ್ವಯಮ್ ॥

ಅಂತರ್ಧ್ವನಿ ಸಮಾಯುಕ್ತಂ। ಕೃಷ್ಣವರ್ಣಂಸವರ್ತುಳಮ್ ॥
ಹಿರಣ್ಯಗರ್ಭ ಪ್ರಥಿತಂ। ಸ್ವರ್ಣರೇಖಾಸಮನ್ವಿತಮ್ ॥

ಇದಕ್ಕೆ ವದನವಿರುವುದಿಲ್ಲ. ಸ್ವರ್ಣಬಿಂದುವಿನಿಂದ ಯುಕ್ತವಾಗಿದ್ದು, ವಜ್ರತುಂಬಿಯಂತಹ ಶರೀರದಿಂದ ಹೊಳೆಯುವ ಇದನ್ನು ಸರ್ವಾಂತರ್ಯಾಮಿಯ ಸಾನ್ನಿಧ್ಯದಿಂದ ಕೂಡಿದುದಾಗಿದ್ದು, ಕಿವಿಯ ಹತ್ತಿರ ತೆಗೆದುಕೊಂಡು ಹೋದರೆ ಒಂದು ತರಹದ ಧ್ವನಿಯು ಕೇಳಬರುತ್ತಿದ್ದರೆ ಅಂಥದನ್ನು ಸ್ವರ್ಣಗರ್ಭ ಸಾಲಿಗ್ರಾಮ ಎಂದು ಕರೆಯುವರು. ಬಹು ಅಪರೂಪವಾಗಿ ಇದನ್ನು ಕಾಣಬಹುದು.

*ಶೇಷ ಸಾಲಿಗ್ರಾಮ :*

ಪೃಷ್ಠಾದಿ ಮೂರ್ಧಾಪರ್ಯಂತಮ್। ವಲಯಾಕಾರರೇಖಯಾ ॥
ಸುವರ್ಣನಿಭಯಾದ್ವಿತ್ರಿ । ಚುತ್ರಿ ಃ ಪಂಚಾದಿಸಂಖ್ಯಯಾ ॥

ಸಂಯುಕ್ತಾ‌ಚದ್ವಿಚಕ್ರಾಢ್ಯಾ। ಶ್ಯಾಮಾನೀಲಾಸಿತಾಪಿವಾ ॥
ಅಥವಾ ಕುಂಡಲೀಭೂತ। ನಾಗಭೋಗಾಭರೇಖಿತಮ್ ॥

ಶೇಷಮೂರ್ತಿಸ್ತುಭಗವಾನ್। ಅಶೇಷೈಶ್ವರ್ಯದಾಯಕಃ ॥

ಈ ಸಾಲಿಗ್ರಾಮವು ಮುಂದಿನಿಂದ ಹಿಂಬದಿಯವರೆಗೆ ಉರುಟಾದ ರೇಖೆಗಳಿಂದ ಕೂಡಿದ್ದರೆ, ಸ್ವರ್ಣವರ್ಣ ಅಥವಾ ನೀಲಿಯುಕ್ತ ಇಲ್ಲವೇ ಕಪ್ಪಾಗಿದ್ದು ಐದು ಅಥವಾ ಎರಡು ಚಕ್ರಗಳಿಂದ ಕೂಡಿದ್ದರೆ ಇಲ್ಲವೇ ಉರುಟಾದ ಎರಡು ಕುಂಡಲಿಗಳು ಕಾಣುತ್ತಿದ್ದರೆ, ಅಥವಾ ಸರ್ಪದ ಹೆಡೆಯ ರೇಖಾ ಚಿತ್ರವಿದ್ದರೆ, ಅಂಥದನ್ನು ಆದಿಶೇಷನ ಮೂರ್ತಿ

ಎಂದೆನ್ನುವರು. ಈ ಸಾಲಿಗ್ರಾಮವನ್ನು ಪೂಜಿಸುವುದರಿಂದ ಅಷ್ಟೈಶ್ವರ್ಯವು ಲಭಿಸುವದು.

*ಭಗ್ನ ಸಾಲಿಗ್ರಾಮ :*

> ಏಕಚಕ್ರಸ್ತುವದನೇ। ಪಾರ್ಶ್ವೇರಕ್ತಃ ಸಮಂತತಃ॥
> ಪ್ರಭುರ್ಭಗ್ನ ಇತಿಖ್ಯಾತ। ಪೂಜಿತೋ ಮೃತ್ಯುದಾಯಕಃ॥

ಮುಖದಲ್ಲಿ ಒಂದು ಚಕ್ರ ಕೆಂಪು ವರ್ಣವಿದ್ದಲ್ಲಿ ಅದನ್ನು ಭಗ್ನಮೂರ್ತಿ ಎಂದೆನ್ನುವರು. ಇದನ್ನು ಪೂಜಿಸಬಾರದು. ಪೂಜಿಸದಲ್ಲಿ ಮರಣ ಪ್ರಾಪ್ತಿಯಾಗುವದು.

*ಗೌರೀನಾಭ ಪ್ರಜಾಪತಿ ಸಾಲಿಗ್ರಾಮ :*

> ಗೌರೀನಾಭಂನಿಮ್ನಲಿಂಗಂ। ಸಮಲಿಂಗಂಪ್ರಜಾಪತಿಃ॥

ಸಾಲಿಗ್ರಾಮದಲ್ಲಿ ಲಿಂಗದ ಗುರುತು, ತೋಡಿದಂತಹ ತಗ್ಗಿನ ಪ್ರದೇಶವಿದ್ದಲ್ಲಿ ಅದನ್ನು ಗೌರೀನಾಭ ಎಂದೆನ್ನುವರು. ಒಂದು ವೇಳೆ ಗುರುತು ಸಮನಾಗಿದ್ದರೆ ಅದನ್ನು ಪ್ರಜಾಪತಿ ಎಂದು ಗುರುತಿಸಲಾಗುವುದು.

*ಶಿವನಾಭೀ ಸಾಲಿಗ್ರಾಮ :*

> ಸ್ಥಿರಾಸನಂ ಮಧ್ಯನಾಭಿ। ಹೇಮರೇಖಾವಿರಾಜಿತಂ॥
> ಸ್ನಿಗ್ಧನೇತ್ರಪ್ರಿಯಂಯತ್ತತ್। ಶಿವನಾಭಿಷುಜೋತ್ತಮ್॥
>
> ಕೂರ್ಮಚಕ್ರೇತ್ವಧೋಭಾಗೇ। ಲಿಂಗಭಾಗೇಖುರಾನ್ವಿತಃ॥
> ಶಿವನಾಭ ಇತಿಖ್ಯಾತೋ। ಭುಕ್ತಿಮುಕ್ತಿಫಲಪ್ರದ॥

ಸರಿಯಾದ ಪೀಠವಿದ್ದು ಮಧ್ಯದಲ್ಲಿರುವ ನಾಭಿಯ ಸುತ್ತಲೂ ಸುವರ್ಣ ರೇಖೆಗಳಿದ್ದು ಕೋಮಲ ನೇತ್ರಗಳಿಂದ ಕೂಡಿದ್ದರೆ ಅದನ್ನು ಶಿವನಾಭಿ ಎಂದೆನ್ನುವರು. ಇದು ಬಹು ಉತ್ತಮವಾದ ಸಾಲಿಗ್ರಾಮ. ಒಂದು ರೀತಿಯಲ್ಲಿ

ಕೆಳಭಾಗದಲ್ಲಿ ಆಮೆಯಾಕಾರದ ಚಕ್ರವಿದ್ದು ಹಿಂಭಾಗದಲ್ಲಿ ಎತ್ತಿನ ಗೊರಸಿನಂತಹ ಚಿಹ್ನೆಗಳು ಕಾಣುತ್ತಿದ್ದರೆ ಅದನ್ನೂ ಸಹ ಶಿವನಾಭಿ ಎಂದೇ ಗುರುತಿಸುವರು. ಈ ಎರಡೂ ತರಹದ ಸಾಲಿಗ್ರಾಮಗಳು ಬಹು ಖ್ಯಾತಿಯನ್ನು ಹೊಂದಿವೆ. ಇದನ್ನು ಪೂಜಿಸಿದರೆ ಸಕಲ ಸೌಭಾಗ್ಯವು ಲಭಿಸುವುದು.

*ಅಘೋರ ಸಾಲಿಗ್ರಾಮ :*

ಸರ್ವತ್ರಲೋಹಿತಾಕಾರೋ। ಮೂರ್ಧ್ನಿರಕ್ತಜಟಾಶಶೀ ॥
ಅಘೋರೋಯತಿಭಿಃ ಸೇವ್ಯಃ। ಗೃಹಿಭಿರ್ಬ್ರಹ್ಮಚರ್ಯತಃ ॥

ಮೂರ್ತಿಯು ಸಂಪೂರ್ಣ ಕೊಡಲಿಯ ಆಕಾರವಿದ್ದು ಅದರ ತಲೆಯು ಕೆಂಪಾಗಿದ್ದು ಜಡೆಯ ಮೇಲೆ ಅರ್ಧಚಂದ್ರದ ಗುರುತುಗಳಿದ್ದಲ್ಲಿ ಈ ಸಾಲಿಗ್ರಾಮವನ್ನು ಸನ್ಯಾಸಿಗಳು ಮಾತ್ರ ಪೂಜಿಸಬೇಕು. ಒಂದು ವೇಳೆ ಬ್ರಹ್ಮಚರ್ಯಾಶ್ರಮಿಯೂಪೂಜಿಸಿಬಹುದು. ಗೃಹಸ್ಥಾಶ್ರಮಿಯು ಮಾತ್ರ ಇದನ್ನು ಪೂಜಿಸಬಾರದು.

*ಸದ್ಯೋಜಾತ ಸಾಲಿಗ್ರಾಮ :*

ಹೇಮವರ್ಣಜಟಾಯುಕ್ತೋ। ಹೇಮಬಿಂದುಸಮಸ್ಥಿತಃ ॥
ಮಸ್ತಕೇಗೋಂಕುರಾಕಾರಃ। ಚಂದ್ರಗಂಗಾಸಮನ್ವಿತಃ ॥

ಸದ್ಯೋಜಾತಾಭಿಧಾನಃ ಸ್ಯಾತ್। ಪುತ್ರಪೌತ್ರಧನಪ್ರದಃ ॥

ಮೂರ್ತಿಯ ಶಿರದಲ್ಲಿ ಚಿನ್ನದ ಬಣ್ಣ ಹಾಗೂ ಜಡೆ, ಚಿನ್ನದ ಒಂದು ಬಿಂದು, ಹಣೆಯಲ್ಲಿ ಗೊರಸಿನಾಕಾರದ ಚಂದ್ರನ ಗುರುತು, ಅದರೊಂದಿಗೆ ಗಂಗೆ ಧುಮುಕುವ ಸಂಕೇತವಿದ್ದಲ್ಲಿ ಅದನ್ನು ಸದ್ಯೋಜಾತ ಮೂರ್ತಿ ಸಾಲಿಗ್ರಾಮವೆಂದೆನ್ನುವರು. ಇದನ್ನು ಪೂಜಿಸುವುದರಿಂದ ಧನಕನಕಾದಿಗಳೊಂದಿಗೆ ಸಂತಾನ ಸಂಪತ್ತನ್ನೀಯುವದು.

### ವಾಮದೇವ ಸಾಲಿಗ್ರಾಮ :

ಲಿಂಗೇಶಕ್ತ್ಯಾರಕ್ತವರ್ಣಾ। ಶ್ವೇತಚಂದ್ರಜಟಾಧರಾ ॥
ವಾಮದೇವಾಭಿಧಾಮೂರ್ತಿಃ। ಭೋಗಮೋಕ್ಷಫಲಪ್ರದಾ ॥

ರಕ್ತವರ್ಣದ ಸಾಲಿಗ್ರಾಮದಲ್ಲಿ ಜಡೆ ಇದ್ದು ಅದರಲ್ಲಿ ಬಿಳಿಯ ರೂಪದಲ್ಲಿ ಅರ್ಧಚಂದ್ರಾಕೃತಿ ಇದ್ದರೆ ಅಂಥದನ್ನು ಹೆಚ್ಚು ಶಕ್ತಿಶಾಲಿಯಾದ ವಾಮದೇವಮೂರ್ತಿ ಎಂದು ತಿಳಿಯಬೇಕು. ಇದು ಇಷ್ಟಾರ್ಥಗಳನ್ನು ಕೈಗೂಡಿಸುವಂತಹದು.

### ಈಶಾನಮೂರ್ತಿ ಸಾಲಿಗ್ರಾಮ :

ಕಿಂಚಿತ್ಕಪಿಲಸಂಯುಕ್ತಾ। ಕೃಷ್ಣಚಂದ್ರಜಟಾನ್ವಿತಾ ॥
ಪಾರ್ಶ್ವೇರೇಖಾ ಸಮೋಪೇತಾ। ಈಶಾನಾ ಮೂರ್ತಿರುಚ್ಯತೇ ॥

ಪೂರ್ವಭಾಗೇಜಟಾರೇಖಾ। ವಿದ್ಯುದ್ವರ್ಣಾಶಶೀತಥಾ ॥
ತತ್ಪುರುಷಾಭಿಧಾನಾಸಾ। ದುರ್ಲಭಾಸರ್ವಕಾಮದಾ ॥

ಈ ಸಾಲಿಗ್ರಾಮದಲ್ಲಿ ಮೇಲ್ಭಾಗದಲ್ಲಿ ಜಡೆ, ಚಂದ್ರನ ಗುರುತು, ಕಪ್ಪಾಗಿದ್ದು ಕಪಿಲ ವರ್ಣದಿಂದ ಕೂಡಿದುದು ಈಶಾನ ಸಾಲಿಗ್ರಾಮವೆನಿಸುವದು. ಅದೇ ರೀತಿ ಪಕ್ಕದಲ್ಲಿ ಸಮನಾದ ರೇಖೆಗಳು ಕಾಣಿಸಿದರೂ ಅದನ್ನು ಈಶಾನ ಎನ್ನುವರು. ಇನ್ನೊಂದು, ಮುಂಭಾಗದಲ್ಲಿ ಜಡೆಯ ಆಕಾರ, ಚಂದ್ರನ ಗುರುತಿದ್ದರೆ ಅದು ಇಷ್ಟಾರ್ಥವನ್ನು ಪೂರೈಸಬಲ್ಲದು.

### ಮಹಿಷಾಕ್ಷ ಸಾಲಿಗ್ರಾಮ :

ಮಸ್ತಕೇಮಹಿಷಾಕ್ಷಾಭಂ। ಲಿಂಗಶೃಂಗ ಸಮನ್ವಿತಮ್ ॥
ಅತಿನೀಲಂ ಘನಂಶ್ಲಕ್ಷ್ಣಂ। ಹೇಮಬಿಂದುಖುರಾನ್ವಿತಮ್ ॥

ಮಹಿಷಾಖ್ಯಮಿತಿಜ್ಞೇಯಂ ಶಿವನಾಭಂಸುಖಾವಹಂ ||

ಕಡಲಿನ ಬಣ್ಣ, ಸುವರ್ಣಬಿಂದು, ತಲೆಯ ಮೇಲೆ ಗುಗ್ಗುಲದ ಬಣ್ಣದಲ್ಲಿ ಲಿಂಗ ಹಾಗೂ ಕೋಡಿನ ಗುರುತುಗಳಿದ್ದಲ್ಲಿ ಇದನ್ನು ಮಹಿಷಾಕ್ಷ ಸಾಲಿಗ್ರಾಮ ಎಂದೆನ್ನುವರು.

*ಪಾರ್ಥಪ್ರಹಾರ ಸಾಲಿಗ್ರಾಮ :*

ಇಂದ್ರನೀಲನಿಭಂಶ್ಲಕ್ಷ್ಣಂ | ಹೇಮಬಿಂದು ಜಟಾನ್ವಿತಮ್ |
ಚಂದ್ರಗಂಗಾ ಸಮಾಯುಕ್ತಂ | ಮಸ್ತಕೇದಂಡರೇಖಕಂ ||

ಪಾರ್ಥ ಪ್ರಹಾರಮೂರ್ತಿತಂ | ದ್ವಿದ್ಯೈಶ್ವರ್ಯಯಶಃ ಪ್ರದಮ್ ||

ಕಾಮನ ಬಿಲ್ಲಿನಂತೆ ಇರುವ ಸಾಲಿಗ್ರಾಮದಲ್ಲಿ ಸ್ವರ್ಣಬಿಂದು, ಜಡೆ ಹಾಗೂ ಚಂದ್ರನ ಗುರುತು, ಗಂಗಾಪ್ರವಾಹದ ಹೊಳಪು, ಶಿರೋಭಾಗದಲ್ಲಿ ದಂಡರೇಖೆ ಇದ್ದಲ್ಲಿ, ಅಂಥದನ್ನು ಪಾರ್ಥಪ್ರಹಾರ ಸಾಲಿಗ್ರಾಮವೆನ್ನುವರು.

*ಸೂರ್ಯ ಸಾಲಿಗ್ರಾಮ*

ದ್ವಿಲಿಂಗೋವಾತ್ರಿಲಿಂಗೋವಾ | ಚತುಷ್ಪಂಚಾದಿ ಲಿಂಗವಾನ್ ||
ತತ್ತದ್ರುಧ್ರಾಬಿದಾನಸ್ಯಾತ್ | ದೇವೋದೇವತ್ವದಾಯಕಃ ||

ಬಾಹ್ಯೇವಾಭ್ಯಂತರೇವಾಪಿ | ಚಕ್ರದ್ವಾದಶಕೈರ್ಯುತಮ್ ||
ಸೂರ್ಯಮೂರ್ತಿಃ ಖಿಗೇಶಾನ | ಸರ್ವವ್ಯಾದಿ ವಿನಾಶಿನೀ ||

ಮೂರ್ತಿಯಲ್ಲಿ ಎರಡು ಅಥವಾ ಮೂರು ಇಲ್ಲವೇ ನಾಲ್ಕು, ಐದು ಹೀಗೆ ಲಿಂಗದ ಗುರುತುಗಳಿದ್ದಲ್ಲಿ ಅದರ ಒಳಗಾಗಲೀ ಇಲ್ಲವೇ ಹೊರಗಾಗಲೀ ಚಕ್ರದ ಗುರುತುಗಳಿದ್ದಲ್ಲಿ, ಅದರಲ್ಲಿಯ ಚಿಹ್ನೆಗಳು ಆಯಾಯ ತಿಂಗಳುಗಳ ಸೂಚಕವೆಂದು ತಿಳಿಯಬೇಕು. ಇದನ್ನು ಆರಾಧಿಸಿದಲ್ಲಿ ಸರ್ವರೋಗ ನಿವಾರಣೆಯಾಗುವದು.

*ವಿಷ್ಣು ಪಂಜರ ಸಾಲಿಗ್ರಾಮ :*

ಬಿಂದುತ್ರಯ ಸಮೋಪೇತಂ। ಚಕ್ರಶಂಖಾದಿಲಾಂಛಿತಮ್ ॥
ವಿಷ್ಣುಪಂಜರಮಾಖ್ಯಾತಂ। ಚಕ್ರಮಾಸ್ಯನಮಾವಗಂ॥

ಪುಂಡರೀಕಪ್ರಲಂಬಘ್ನೋ। ವೈಕುಂಠೋಮಧುಸೂದನ ॥

ಮೂರು ಚಕ್ರಗಳು ಯಾವ ಸಾಲಿಗ್ರಾಮದಲ್ಲಿವೆಯೋ ಅಂಥದನ್ನು ವಿಷ್ಣು ಪಂಜರವೆನ್ನುವರು. ಒಂದು ವೇಳೆ ಒಂದು ಚಕ್ರವು ಮುಖದ ಮುಂಭಾಗದಲ್ಲಿದ್ದರೆ ಅದನ್ನು ಪುಂಡರೀಕ ಇಲ್ಲವೆ ವೈಕುಂಠವಾಸಿ ಮಧುಸೂದನ ಎಂದು ತಿಳಿಯಬೇಕು.

ಸುದರ್ಶನೋನರೋರಾಮೋ। ಲಕ್ಷ್ಮೀನಾರಾಯಣಸ್ತಥಾ ॥
ಮಾಧವಶ್ಚಹಯಗ್ರೀವಃ। ಪರಮೇಷ್ಠೀತಥೈವಚ ॥

ವಿಶ್ವಕ್ಸೇನಃ ಸವಿಜ್ಞೇಯ। ಏಕಚಕ್ರಾಶ್ಚತುರ್ದಶ ॥
ದ್ವಿಚಕ್ರಮೂರ್ತಯಸ್ತ್ವಾವ। ನ್ನಗಂಣ್ಯಂತೆಬಹುತ್ವತಃ ॥

ಮತ್ಸ್ಯಾದ್ಯಾಹೇಹಯಾಂತಾಶ್ಚ। ಕಥಾಪ್ಯಧಿಕಧಾಭುಧ್ಯೈ: ॥
ಅಧೋಮುಖನೃಸಿಂಹಶ್ಚ। ಶಿಂಶುಮಾರಸ್ತ್ರಿ ವಿಕ್ರಮಃ ॥

ಸೀತಾರಾಮಃ ಶ್ರಿಮೂರ್ತಿಶ್ಚ। ಶ್ರೀಧರಃ ಪುರುಷೋತ್ತಮಃ ॥
ಶೀತೇಶೋಮತ್ಸ್ಯಮೂರ್ತಿಃ। ಬುದ್ಧಸ್ತ್ತ ಕೂರ್ಮಶ್ಚದೈವಚ ॥

ಲಕ್ಷ್ಮೀನಾರಾಯಣಶ್ಚೈವ। ದ್ವಾದಶೈತೇತ್ರಿಚಕ್ರಕಾಃ ॥
ಚತುಶ್ಚಕ್ರೋಹರಿಹರಃ। ಸೀತಾರಾಮೋಜನಾರ್ದನಃ ॥

ವಿಶ್ವಂಭರಃಕಂಸಮರ್ದೀ। ಪಾರಿಜಾತಶ್ಚಕೇಶವಃ ॥
ಲಕ್ಷ್ಮೀನಾರಾಯಣಶ್ಚೈವ। ಶಿವನಾರಾಯಣಸ್ತಥಾ ॥

ಹಿಂದೆ ಹೇಳಿದಂತೆ ಈ ಸಾಲಿಗ್ರಾಮಗಳನ್ನು ಲಕ್ಷ್ಮೀನಾರಾಯಣ, ಮಾಧವ ಹಯಗ್ರೀವ ಎಂದು ಗುರುತಿಸುವರು. ಅಲ್ಲದೇ ಇದನ್ನು ವಿಶ್ವಕ್ಸೇನ ಎಂದೂ ಭಾವಿಸುವರು. ಅವರವರ ಮನೆಯ ಕುಲದೈವವನ್ನು ಆವಾಹನ ಮಾಡಿ ಪೂಜಿಸುವರು. ಕೆಲವು ಸಂದರ್ಭದಲ್ಲಿ ಒಂದು ಚಕ್ರದಿಂದ ಹದಿನಾಲ್ಕು ಚಕ್ರಗಳಿರುವದನ್ನು ಕಾಣಬಹುದು. ಸೀತಾರಾಮ, ಶ್ರೀಧರ, ಪುರುಷೋತ್ತಮ ಮೊದಲಾದ ಸಾಲಿಗ್ರಾಮಗಳೂ ಇವೆ. ಈ ರೀತಿ ಮತ್ಸ್ಯಾದಿ ಸಾಲಿಗ್ರಾಮಗಳಿಂದಾರಂಭ ಮಾಡಿಕೊಂಡು ಲಕ್ಷ್ಮೀನಾರಾಯಣ ಸಾಲಿಗ್ರಾಮದವರೆಗಿನ ಹನ್ನೆರಡು ಸಾಲಿಗ್ರಾಮಗಳಲ್ಲಿ ಮೂರು ಚಕ್ರಗಳು, ಅಲ್ಲದೆ ಈ ಹಿಂದೆ ವಿವರಿಸಲಾದ ಮತ್ಸ್ಯ, ಹಯಗ್ರೀವ ಮೊದಲಾದ ರೂಪಗಳನ್ನು ಸಾಲಿಗ್ರಾಮದಲ್ಲಿ ಆವಾಹನೆ ಮಾಡಿ ಪೂಜಿಸಬಹುದು ಎಂದು ಸಾಲಿಗ್ರಾಮದ ವಿಚಾರವನ್ನು ಚೆನ್ನಾಗಿ ಅಭ್ಯಾಸ ಮಾಡಿದವರ ಅಭಿಪ್ರಾಯವಾಗಿರುವದು.

*ಕಾಮಧೇನು ಸಾಲಿಗ್ರಾಮ :*

ಕಾಮಧೇನುರಿತಿಜ್ಞೇಯಃ। ಚತುಶ್ಚಕ್ರಾದ್ದ್ವಶೈವತು ॥
ಗೋಸ್ತನಾಕೃತಿವಚ್ಚಕ್ರೇ। ಮಧ್ಯೇಸುಷಿರಮೇವಚ ॥

ಕಿಂಚಿದುನ್ನತಮಸ್ತಗ್ರಂ। ಶೃಂಗಪುಚ್ಛಸಮನ್ವಿತಮ್ ॥
ವರ್ತುಳಂ ಕಪಿಲಾಕಾರಂ। ಸ್ವರ್ಣಬಿಂದುಸಮನ್ವಿತಮ್ ॥

ನಾಲ್ಕು ಚಕ್ರದ ಸಾಲಿಗ್ರಾಮ, ಮಧ್ಯದಲ್ಲಿ ಮೂರ್ತಿಯಂತಹ ಹತ್ತು ತೂತುಗಳಿದ್ದರೆ, ಎದುರುಬದಿರಾಗಿ ಕೊಂಬಿನ ಗುರುತುಗಳಿದ್ದರೆ, ಬಾಲದ ಗುರುತು ಕಾಣಿಸುತ್ತಿದ್ದರೆ ಕಪಿಲವರ್ಣ, ಸುವರ್ಣ ಬಿಂದುವಿದ್ದರೆ ಅದನ್ನು ಕಾಮಧೇನು ಸಾಲಿಗ್ರಾಮ ಎಂದು ತಿಳಿಯಬೇಕು.

ತೋಯಸ್ರವಂ ಸದಾಕಾಲಂ। ಗೋಸ್ತನಾಂತೇಚಕೇಸರೇ ॥
ತುಶೀತಳ ಮಹಾಸ್ನಿಗ್ಧಂ। ನಿತ್ಯಂಸರ್ವಾರ್ಥಸಿದ್ಧಿದಂ ॥

ಸರ್ವವಶ್ಯಕರಂನಿತ್ಯ । ಸರ್ವಾನಂದಕರಂಪರಂ ॥
ಸರ್ವದುಃಖ ಪ್ರಶಮನಂ । ಸರ್ವರೋಗನಿವಾರಣಂ ॥

ವನೇವಾನಗರೇವಾಪಿ । ಯತ್ರಯತ್ರಸ್ಥಿತಂ ಭವೇತ್ ॥
ತತ್ರಸರ್ವಸಮೃದ್ಧಿಸ್ಯಾತ್ । ಕಾಮಧೇನು ಪ್ರಪೂಜನಾತ್ ॥

ಈ ಕಾಮಧೇನು ಸಾಲಿಗ್ರಾಮವನ್ನು ಸಂಪುಟದಲ್ಲಿರಿಸಿದಾಗಲೂ ಸಹ ಆ ಸಂಪುಟವು ಸದಾ ತೇವದಿಂದ ಕೂಡಿರುತ್ತದೆ. ಇದು ಅಸಾಮಾನ್ಯ ಸಾಲಿಗ್ರಾಮವೆನಿಸುವದು. ಇದನ್ನು ಪೂಜಿಸಿದಲ್ಲಿ ಸಕಲ ಸಿದ್ಧಿಗಳು ಲಭಿಸುವದು. ಇದು ಮಹಾ ಚೈತನ್ಯದಾಯಿ ಎನಿಸುವದು. ಈ ಸಾಲಿಗ್ರಾಮ ಯಾರಲ್ಲಿರುವದೋ ಅಂಥವರು ಕಾಡಿನಲ್ಲಿದ್ದರೂ ಅವರಿಗೆ ಸಕಲ ಸಮೃದ್ಧಿಯು ಲಭಿಸುವದು.

ಸಾಲಿಗ್ರಾಮಗಳು ನಿಸರ್ಗದ ಕೊಡುಗೆಯಾಗಿರುವವು. ಭಗವಂತನ ಲೀಲಾವಿನೋದಗಳಲ್ಲಿ ಅವುಗಳ ರಚನಾ ಚಮತ್ಕಾರಗಳು ಅಡಕವಾಗಿರುವುದನ್ನು ಕಂಡು ಯಾರು ಭಕ್ತಿ, ಶ್ರದ್ಧೆಗಳಿಂದ, ನಿರ್ಮಲ ಮನಸ್ಸಿನಿಂದ ಅವುಗಳನ್ನು ಪೂಜೈಗೈಯುತ್ತಾ ಹೋಗುವರೋ, ಅಂತಹವರಿಗೆ ಇಹದಲ್ಲಿಯೂ ಸುಖ ಹಾಗೂ ಪರಲೋಕದಲ್ಲಿಯೂ ಸಹ ದೇವಸನ್ನಿಧಿಯು ಲಭಿಸುವುದು.

– : ಶ್ರೀ ಕೃಷ್ಣಾರ್ಪಣಮಸ್ತು : –

☆ ☆ ☆ ☆

# ತುಳಸಿ

ಕೃಷ್ಣಾ ನಂದಾಶ್ರು ಸಂಭೂತೇ ವರದೇ ತುಳಸಿ ಸ್ವಯಂ।
ತ್ವಂ ಪೀಠೇಸತತಂ ಸ್ಥಿತ್ವಾ ಮಮಪೂಜಾ ಗೃಹಾಣ ವೈ ॥

---

ಭಾರತೀಯರ ಮನೆಗಳನ್ನು ಹಾಗೂ ಮನವನ್ನು ಏಕಪ್ರಕಾರವಾಗಿ ಅಲಂಕರಿಸಿದ ಸಸ್ಯವೆಂದರೆ ತುಳಸಿಯ ವೃಕ್ಷ ಎಂದು ಹೇಳಬಹುದು. ಹಿಂದೂ ಸ್ತ್ರೀಯು ತನ್ನ ಪತಿಯನ್ನು ಕುರಿತು 'ಪ್ರಾಣಪ್ರಿಯನೇ ಒಂದು ವೇಳೆ ನೀನು ನಿನ್ನ ಹೃದಯದಲ್ಲಿ ನನಗಾಗಿ ಸ್ಥಾನವನ್ನು ಕೊಡದಿದ್ದರೂ ಚಿಂತೆಯಿಲ್ಲ, ಆದರೆ ನಿನ್ನ ಮನೆಯಂಗಳದಲ್ಲಿ ತುಳಸಿ ವೃಕ್ಷವಾಗಿ ನಿನ್ನ ಸಂಸಾರವನ್ನು ನೋಡಿ ನಲಿಯುವಂಥ ಸೌಭಾಗ್ಯವನ್ನು ಮಾತ್ರ ಕೊಡು'' ಎಂದು ಪ್ರಾರ್ಥಿಸಿಕೊಂಡ ಅನೇಕ ಉದಾಹರಣೆಗಳು ಕಾಣಸಿಗುತ್ತವೆ. ಈ ವೃಕ್ಷವು ಹಿಂದೂಗಳ ಧಾರ್ಮಿಕ, ಸಾಂಸ್ಕೃತಿಕ ಸ್ವರೂಪ ಲಕ್ಷಣವಾಗಿದೆ.

ತುಳಸೀಕಾನನಂ ಯತ್ರ ಯತ್ರಪದ್ಮವನಾನಿಚ।
ವಸಂತಿ ವೈಷ್ಣವಾಯತ್ರ ತತ್ರಸನ್ನಿಹಿತೋಹರಿಃ॥

ಯಾವ ಸ್ಥಳದಲ್ಲಿ ತುಳಸೀ ವೃಕ್ಷದ ವನವು ಹಬ್ಬಿದಯೋ ಅಂತಹ ಸ್ಥಳದಲ್ಲಿ ಶ್ರೀಹರಿಯು ವಾಸ ಮಾಡುತ್ತಾನೆ ಎಂಬ ನಂಬಿಕೆ ನಮ್ಮದಾಗಿದೆ.

ತುಳಸಿ ವೃಕ್ಷದ ಹುಟ್ಟು ಹಾಗೂ ಅದರ ಬೆಳವಣಿಗೆಗಳನ್ನು ಕುರಿತು ಚಮತ್ಕಾರಿಕವಾದ ಕೆಲವು ಕಥೆಗಳಿವೆ. ರಾಜಾಧರ್ಮಧ್ವಜ ಹಾಗೂ ಆತನ ಪತ್ನಿಯಾದ ಮಾಧವೀ ದೇವಿಗೆ ಪದ್ಮಿನಿ ಎಂಬ ಹೆಸರಿನ ಬಹು ಸುಂದರಿಯಾದ ಮಗಳೊಬ್ಬಳಿದ್ದಳು. ಅವಳ ರೂಪರಾಶಿಯನ್ನು ಕಂಡ ಪ್ರಜಾ ಕೋಟಿಯು ಅವಳನ್ನು ತುಳಸಿ ಎಂಬ ಹೆಸರಿನಿಂದ ಕರೆಯುತ್ತಲಿತ್ತು. ತುಳಸಿ ಬೆಳೆದು ದೊಡ್ಡವಳಾದಂತೆಲ್ಲ ಶ್ರೀಹರಿಯು ಅವಳ ಮನವನ್ನು ಆವರಿಸಿದನು. ಶ್ರೀವಿಷ್ಣುವೇ ತನಗೆ ಪತಿಯಾಗಬೇಕೆಂಬ ಬಯಕೆಯಿಂದ ಅವಳು ಬಹುದೀರ್ಘ ಕಾಲ ತಪವನ್ನು ಆಚರಿಸಿದಳು. ಒಂದು ದಿನ ಶ್ರೀಹರಿಯು ಅವಳನ್ನು ಗೋವುಗಳ ಲೋಕಕ್ಕೆ ಕರೆದುಕೊಂಡು ಹೋದನು. ಈ ಘಟನೆ ಹೇಗೋ ಶ್ರೀ ಲಕ್ಷ್ಮಿಗೆ ತಲುಪಿತು. ಅವಳ ಸವತಿ ಮತ್ಸರವು ಪ್ರಕಟವಾಗತೊಡಗಿತು. ಅದನ್ನು ತಡೆಯದೆ ತುಳಸಿ ವೃಂದಾವನದಲ್ಲಿ ಸಸಿಯಾಗಿ ಬೆಳೆಯತೊಡಗಿದಳು. ಆದುದರಿಂದ ಇವಳನ್ನು–

ವೃಂದಾ ವೃಂದಾವನೀ ವಿಶ್ವಪೂಜಿತಾ ವಿಶ್ವಪಾವನೀ
ಪುಷ್ಪಸಾರ ನಂದಿನೀ ತುಳಸೀ ಕೃಷ್ಣ ಜೀವನೀ॥

ಎಂಬೆಲ್ಲ ಹೆಸರುಗಳಿಂದ ಕರೆಯಲಾರಂಭಿಸಿದರು.

ತುಳಸಿಯ ಬಗ್ಗೆ ಇನ್ನೊಂದು ಕಥೆಯೂ ಇದೆ. ಜಾಲಂಧರ ಎಂಬ ದೈತ್ಯನಿಗೆ ವೃಂದಾ ಎಂಬ ಹೆಸರಿನ ಬಹು ಸುಂದರಿಯಾದ ಹೆಂಡತಿ ಇದ್ದಳು. ಅವಳ ಸೌಂದರ್ಯದ ಕೀರ್ತಿಯು ತ್ರಿಲೋಕವನ್ನೆಲ್ಲ ವ್ಯಾಪಿಸಿತ್ತು. ಈ

ವೃಂದೆಯ ರೂಪರಾಶಿಗಳನ್ನು ಕಂಡು ವಿಷ್ಣು ಮೋಹಿತನಾದ. ಎಡಬಿಡದೆ ಅವಳನ್ನು ಹಿಂಬಾಲಿಸತೊಡಗಿದ. ಆಗ ವೃಂದೆಯು ಲಕ್ಷ್ಮಿ, ಸರಸ್ವತಿಯರನ್ನು ಕಂಡು ಶ್ರೀವಿಷ್ಣುವಿನ ಮೋಹಪಾಶದಿಂದ ತನ್ನನ್ನು ರಕ್ಷಿಸಬೇಕೆಂದೂ ಸತೀ ಧರ್ಮದ ಮರ್ಯಾದೆಯನ್ನು ಉಳಿಸಬೇಕೆಂದೂ ಪ್ರಾರ್ಥಿಸಿಕೊಂಡಳು. ಆಗ ಅವರು ತಮ್ಮ ಯೋಗಮಾಯೆಯಿಂದ ವೃಂದೆಯನ್ನು ಸಸ್ಯರೂಪದಲ್ಲಿ ಅಡಗಿಸಿಟ್ಟರೆಂದೂ ಅದುವೆ ಮುಂದೆ ತಳಸಿ ಎಂದು ಕರೆಯುವಂತಾಯಿತೆಂದೂ ಆ ತುಳಸಿಯ ವಾಸನೆ ಮಾತ್ರದಿಂದ ವೃಂದೆಯನ್ನು ಶ್ರೀಹರಿಯು ಮರೆತನೆಂದೂ ಆ ಕಥೆಯು ಹೇಳುತ್ತದೆ.

ಬಹು ಜನಪ್ರಿಯಳಾದ ಈ ತುಳಸಿದೇವಿಗೆ ತನ್ನ ವೃಕ್ಷರೂಪವನ್ನು ಬದಲಿಸುವ ಬಯಕೆಯಾಯಿತು. ಆಗ ಅವಳು ಹಿಮವತ್ ಪರ್ವತದ ಒಂದು ಭಾಗದಲ್ಲಿ ಗಂಡಕಿ ಎಂಬ ಹೆಸರಿನ ನದಿಯಾಗಿ ಹರಿಯತೊಡಗಿದಳು. ಪ್ರಾಣಪ್ರಿಯಳಾದ ತುಳಸಿಯನ್ನು ಕಾಣದೆ ಅವಳನ್ನು ಹುಡುಕುತ್ತ ನಡೆದಾಗ ಗಂಡಕಿಯ ರೂಪದಲ್ಲಿ ಹರಿಯುವ ಅವಳನ್ನು ಶ್ರೀ ಹರಿಯು ಕಂಡನು. ಆಗ ಶ್ಯಾಮವರ್ಣದ ಶಿಲೆಯ ರೂಪವನ್ನು ಆತ ಧಾರಣ ಮಾಡಿದನು. ಇವರಿಬ್ಬರ ಪ್ರೇಮ ಜೀವನ ಬ್ರಹ್ಮನಿಗೆ ಮೋಜೀನದಾಗಿ ತೋರಿತು. ಆಗ ಬ್ರಹ್ಮನು ಶನಿಗ್ರಹದ ಪ್ರಯೋಗವು ಆ ಶಿಲೆಯ ಮೇಲಾಗುವಂತೆ ಆಜ್ಞೆ ಮಾಡಿದನು. ಇದರಿಂದಾಗಿ ಶನಿದೇವನು ಸಣ್ಣ ಕೀಟದ ರೂಪವನ್ನು ತಾಳಿ ಶ್ಯಾಮಲ ವರ್ಣದ ಆ ಶಿಲೆಗಳನ್ನು ಕೊರೆಯಲಾರಂಭಿಸಿದನು. ಮುಂದೆ ಆ ಶಿಲೆಗಳು ಮೋಹಕವಾದ ಸಾಲಿಗ್ರಾಮದ ರೂಪವನ್ನು ತಾಳಿದವು. ಹೀಗೆ ಗಂಡಕಿ ನದಿಯಲ್ಲಿ ಹುಟ್ಟಿದ ಸಾಲಿಗ್ರಾಮಗಳನ್ನು ಶ್ರೀಹರಿಯ ಪ್ರತಿರೂಪ ಎಂದು ಪೂಜಿಸುವ ಸಂಪ್ರದಾಯವು ಇಂದಿಗೂ ನಮ್ಮ ಮನೆಗಳಲ್ಲಿ ನಡೆದು ಬಂದ ಪದ್ಧತಿಯಾಗಿರುವದು. ತುಳಸಿ-ಇಲ್ಲದ ಸಾಲಿಗ್ರಾಮದ ಪೂಜೆ ವ್ಯರ್ಥ. ತುಳಸಿ ಹಾಗೂ ಸಾಲಿಗ್ರಾಮಗಳ ಸ್ಪರ್ಶದಿಂದ ಶನಿದೇವನ ಪ್ರಭಾವವು ಕಡಿಮೆಯಾಗುವುದೆಂಬ ನಂಬಿಕೆ ನಮ್ಮ ಜನರಲ್ಲಿ ಮೂಡಿ ಬಂದಿದೆ.

ತುಳಸಿಯ ರೂಪವು ಸಾದಗಪ್ಪು. ಋಗ್ವೇದವೇ ಅವಳ ಶರೀರ.

ಯಜುರ್ವೇದವೇ ಅವಳ ಮನಸ್ಸು. ಅಥರ್ವಣ ವೇದವೇ ಅವಳ ಪ್ರಾಣ. ಕಲ್ಪಗಳೇ ಅವಳ ಹಸ್ತ. ಹೀಗೆ ಅವಳ ದೇಹವು ವೇದವೇದಾಂಗಗಳಿಂದ ಕೂಡಿದುದಾಗಿದೆ. ಕ್ಷೀರಸಾಗರವನ್ನು ಮಂಥನ ಮಾಡಿದಾಗ ಅಮೃತವು ಉದಯಿಸಿತು. ಅದನ್ನು ಹಂಚಿಕೊಳ್ಳಲು ದೇವದಾನವರಲ್ಲಿ ತುಮುಲ ನಡೆದಾಗ ಅಮೃತದ ಕೆಲವು ಬಿಂದುಗಳು ಭೂಮಿಯಲ್ಲಿ ಬಿದ್ದವು. ಆದುದರಿಂದ ಆ ಅಮೃತ ಬಿಂದುಗಳೇ ತುಳಸೀ ವೃಕ್ಷಗಳಾಗಿ ಬೆಳೆದವು. ತುಳಸಿಯಲ್ಲಿ ಕೃಷ್ಣ ತುಳಸಿ, ರಾಮತುಳಸಿ ಹಾಗೂ ರಾಜತುಳಸಿ ಎಂಬ ಅನೇಕ ಪ್ರಕಾರಗಳ ತುಳಸಿ ವೃಕ್ಷಗಳಿವೆ. ಇವುಗಳಲ್ಲಿ ಕೃಷ್ಣ ತಳಸಿ ಬಹು ಶ್ರೇಷ್ಠವಾದುದು. ಈ ತುಳಸಿಯು ಮಂಜರಿ, ಪವಿತ್ರ, ಸುಖವಲ್ಲರಿ, ಪೂರ್ಣ, ಅಜಕಭಾರತಿ, ಮುಲಾಕ, ದಿವ್ಯ, ಕೃಷ್ಣಮಾಲ ಎಂಬೆಲ್ಲ ಹೆಸರುಗಳಿಂದ ವರ್ಣಿತವಾದದ್ದು ಕಂಡುಬರುತ್ತದೆ.

ಕಾರ್ತಿಕ ಶುದ್ಧ ದ್ವಾದಶಿಯ ದಿನ ವೃಂದಾವನಿಯಾದ ಶ್ರೀ ತುಳಸಿಯನ್ನು ಶ್ರೀಕೃಷ್ಣದಾಮೋದರನೊಂದಿಗೆ ವೈಭವದಿಂದ ವಿವಾಹ ಮಾಡುವ ಸಂಪ್ರದಾಯವಿದೆ. ಹಿಂದೂಗಳಲ್ಲಿ ನಡೆಯುವ ಸಸ್ಯಜೀವನದ ಈ ವಿವಾಹ ಪದ್ಧತಿಗೆ ಕುಲ, ಗೋತ್ರ, ಜಾತಿ ಮತ, ಪಂಥ ಪಂಗಡ ಎಂಬ ಬೇಧ ಭಾವಗಳಿಲ್ಲದೆ ಒಂದೇ ದಿನ ಒಂದೇ ಕಾಲದಲ್ಲಿ ಅಂದರೆ ಗೋಧೂಳಿಯ ಲಗ್ನದಲ್ಲಿ ಪ್ರತಿಯೊಬ್ಬ ಹಿಂದೂವಿನ ಮನೆಯಲ್ಲಿಯೂ ವೈಭವದಿಂದ ಈ ವಿವಾಹ ಮಹೋತ್ಸವವು ನಡೆಯುತ್ತದೆ. ಅಂದು ತಮ್ಮ ತಮ್ಮ ಯೋಗ್ಯತೆಗೆ ಅನುಸಾರವಾಗಿ ಮನೆಗಳನ್ನು, ವೃಂದಾವನಗಳನ್ನು ಸುಣ್ಣ ಬಣ್ಣಗಳಿಂದ ತಳಿರು ತೋರಣಗಳಿಂದ ಅಲಂಕರಿಸುತ್ತಾರೆ. ಮನೆಯಂಗಳವನ್ನೆಲ್ಲ ರಂಗವಲ್ಲಿಯಿಂದ ಅಲಂಕರಿಸುತ್ತಾರೆ. ನವರಸ ಪಕ್ವಾನ್ನಗಳನ್ನು ಮಾಡುತ್ತಾರೆ. ಸಾಲುದೀಪವನ್ನು ಹಚ್ಚಿಡುತ್ತಾರೆ. ವೇದೋಕ್ತವಾಗಿ ವಧುವನ್ನು ಅರಿಶಿನ, ಕುಂಕುಮ, ಮಂಗಳಸೂತ್ರ, ಗೆಜ್ಜೆಯವಸ್ತ್ರ, ಹೊಸ ಸೀರೆ ಕುಪ್ಪಸ ಇವುಗಳನ್ನಿಟ್ಟು ತ್ರಿಕರಣಪೂರ್ವಕವಾಗಿ ಶ್ರೀ ದಾಮೋದರನಿಗೆ ಧಾರೆಯೆರೆದು ಕೊಡುತ್ತಾರೆ. ದಾಮೋದರನಿಗೆ ಹೊಸವಸ್ತ್ರ, ಯಜ್ಞೋಪವೀತ ಸಮರ್ಪಿಸುವದುಂಟು.

ಹೀಗೆ ನಿತ್ಯಜೀವನದಲ್ಲಿಯ ವಿವಾಹದಂತೆಯೇ ಚಾಚೂ ತಪ್ಪದೆ ಎಲ್ಲ ವಿಧಿ ವಿಧಾನಗಳಿಂದ ಈ ವಿವಾಹ ಮಹೋತ್ಸವವನ್ನು ಸಾಂಗಗೊಳಿಸುತ್ತಾರೆ. ವೃಂದಾವನೆಯ ವಿವಾಹದ ನಂತರವೇ ತಮ್ಮ ಮಕ್ಕಳ ವಿವಾಹವನ್ನು ಕುರಿತು ಮಾತುಕತೆಗೆ ಆರಂಭಿಸುವ ಸಂಪ್ರದಾಯವು ಇಂದಿಗೂ ಉಂಟು. ತುಳಸಿಯನ್ನು ಅಮಾವಾಸ್ಯೆ, ಪೌರ್ಣಮೆ ದ್ವಾದಶಿ ಹಾಗೂ ಸಂಕ್ರಮಣ ಕಾಲದಲ್ಲಿ ಮಧ್ಯಾಹ್ನ ಹಾಗೂ ರಾತ್ರಿಯ ಕಾಲದಲ್ಲಿ ಶೌಚಾದಿಗಳಲ್ಲಿ ಮುಟ್ಟಬಾರದು. ಸ್ನಾನಾನಂತರ ಶುದ್ಧನಾಗಿ ವೃಂದಾವನ ಪ್ರದಕ್ಷಿಣೆ ತುಳಸಿಯ ದಳ ಸಂಗ್ರಹಣೆ ಇತ್ಯಾದಿಗಳನ್ನು ಮಾಡಬಹುದು.

**ತುಲಸೀಕಾನನಂಚೈವ ಗೃಹೇಯಸ್ಯಾವತಿಷ್ಠತಿ ತದ್‌ಗೃಹಂ।**
**ತೀರ್ಥಭೂತಂಹಿ ನಯಾಂತಿ ಯಮಕಿಂಕರಃ ॥**

ಯಾರ ಮನೆಯಲ್ಲಿ ತುಳಸಿಯ ವನ ಇದೆಯೋ ಅಂಥ ಮನೆಗಳು ತೀರ್ಥಕ್ಷೇತ್ರಗಳಿಗೆ ಸಮಾನವಾದವು. ಅಂಥ ಮನೆಗಳಿಗೆ ಯಮಕಿಂಕರರು ಬರುವುದಕ್ಕೆ ಭಯಪಡುತ್ತಾರೆ. ಪ್ರವಾಸಕ್ಕೆ ಹೊರಟ ಹಿಂದೂಗಳು ವೃಂದಾವನವನ್ನು ಪ್ರದಕ್ಷಿಣೆ ಹಾಕಿಕೊಂಡು ಹೋಗುವ ಸಂಪ್ರದಾಯವಿದೆ. ಮೃತ್ಯುಮುಖದಲ್ಲಿದ್ದವನ ಬಾಯಿಯಲ್ಲಿ ತುಳಸಿ ದಳವನ್ನಿಡುತ್ತಾರೆ. ಇದರಿಂದ ಆತನಿಗೆ ಸದ್ಗತಿಯಾಗುವುದೆಂಬ ನಂಬಿಕೆ ಇದೆ.

ಪಂಜಾಬಿನಲ್ಲಿ ಸಂತತಿಹೀನರಾದ ಧನಿಕರು ತುಳಸಿಯೊಂದಿಗೆ ಓರ್ವ ಬ್ರಾಹ್ಮಣನನ್ನು ಕೂಡಿಸಿ ವಿವಾಹ ಮಾಡುತ್ತಾರೆ. ಇದಾದ ನಂತರ ಆತನನ್ನು ತಮ್ಮ ಅಳಿಯ ಎಂದು ಸ್ವೀಕರಿಸುವ ಸಂಪ್ರದಾಯ ಇದೆ. ಮಹಾಭಾರತದಲ್ಲಿ ತುಲಾಭಾರ ಎಂಬ ಹೆಸರಿನ ಕಥೆಯು ತುಳಸಿಯ ಮಹಾತ್ಮೆಯನ್ನು ಎತ್ತಿ ತೋರಿಸುವುದು. ಆಯುರ್ವೇದ ಗ್ರಂಥಗಳಲ್ಲಿ ಅಷ್ಟಾಂಗ ಹೃದಯ ಚರಕ ಸಂಹಿತೆ ಎಂಬ ಗ್ರಂಥದಲ್ಲಿ ತುಳಸಿಯ ಗುಣಧರ್ಮವನ್ನು, ಉಪಯೋಗವನ್ನು



ಮನೆಯಂಗಳದಲ್ಲಿ ಶೋಭಿಸುವ ತುಳಸಿ ವೃಂದಾವನ.



ಓಂಕಾರದ ಉಪದೇಶವನ್ನಿತ್ತು ಅದರ ಮಹತಿಯನ್ನು ತಿಳಿಸಿಕೊಟ್ಟ ನನ್ನ ಪೂಜ್ಯ ತಂದೆಯವರಾದ ಭಾಗವತರತ್ನ ಪಂ. ದಿ. ಆದ್ಯ ಸೇತುರಾಮಾಚಾರ್ಯರು.

ಕುರಿತು ಅನೇಕ ಶ್ಲೋಕಗಳು ಕಾಣಸಿಗುತ್ತವೆ. ತುಳಸಿಯ ಕಷಾಯವು ಕೆಮ್ಮು, ನೆಗಡಿ, ಶೀತ, ಶ್ಲೇಷ್ಮಾದಿಗಳಿಗೆ ನಿವಾರಕವಾದ ಪೇಯವಾಗಿದೆ. ಇದು ವಿಷಾಣುಗಳನ್ನು ನಾಶಪಡಿಸುವ ಶಕ್ತಿಯನ್ನು ಹೊಂದಿದೆ. ವೃಂದಾವನದಲ್ಲಿ ಉದುರಿದ ಎಲೆಗಳಿಂದ ಮಣ್ಣುಗೂಡಿದ ಅದರ ಮೃತಿಕೆಯನ್ನು ಮೈಗೆ ಧಾರಣೆ ಮಾಡಿಕೊಳ್ಳುವುದರಿಂದ ಕುಷ್ಠಾದಿ ಚರ್ಮರೋಗಗಳು ನಿವಾರಣೆಯಾಗುತ್ತವೆ ಎಂದು ಹೇಳಲಾಗಿದೆ.

ಗ್ರೀಸ್ ದೇಶದಲ್ಲಿ ತುಳಸಿಯ ಗುಣಗಾನ ಮಾಡುವುದಕ್ಕಾಗಿ ಸೆಂಟ್ಸವೆಲಿಸ್ಡೆ ಎಂಬ ಹೆಸರಿನಿಂದ ಇಂದಿಗೂ ಆ ಉತ್ಸವವನ್ನು ಆಚರಿಸುತ್ತಾರೆ. ಅಲ್ಲಿಯ ಧಾರ್ಮಿಕ ಪ್ರವೃತ್ತಿಯ ಸ್ತ್ರೀಯರು ತುಳಸಿಯ ಶಾಖೆಯೊಂದನ್ನು ತಂದು ತಮ್ಮ ಮನೆಯ ಅಂಗಳದಲ್ಲಿ ಕಟ್ಟುತ್ತಾರೆ. ಇದರಿಂದ ಯಾವ ರೋಗಗಳೂ ತಮ್ಮ ಮನೆಯನ್ನು ಪ್ರವೇಶಿಸಲಾರವು ಎಂಬ ನಂಬಿಕೆಯು ಇದೆ. ಭಾರತದ ಪುರಾಣ ಗ್ರಂಥಗಳಲ್ಲಿ ಈ ತುಳಸಿ ವೃಕ್ಷವನ್ನು ಶ್ರೀದೇವಿ, ಧರ್ಮದೇವಿ, ಪ್ರಿಯಸಖಿ ಎಂಬೆಲ್ಲ ಹೆಸರಿನಿಂದ ವರ್ಣಿಸಿದ್ದಾರೆ. ಕನ್ನಡ ನಾಡಿನ ಹರಿದಾಸ ಪಂಥದವರಂತೂ ಈ ದೇವಿಯನ್ನು-

> ''ಒಂದು ದಳ ಶ್ರೀ ತುಳಸಿ ಬಿಂದು ಗಂಗೋದಕವು,
> ಇಂದಿರಾರಮಣನಿಗರ್ಪಿತವೆನ್ನಲು ಒಂದೇ ಮನಸಿನಿಂದ
> ಸಿಂಧುಶಯನ ತಾನು ಎಂದಿಗೂ ವಾಸಿಪ
> ಹೈನ್ ಮಂದಿರದೊಳಗೆ''

ಎಂದೆಲ್ಲ ಹಾಡಿದ್ದಾರೆ. ಮುತ್ತು ರತ್ನ, ವಜ್ರ, ವೈಢೂರ್ಯಗಳ ನೂರಾರು ಮಾಲೆಗಳನ್ನು ಧರಿಸಿದರೂ ತುಳಸಿಯ ಮಾಲೆಯೊಂದಿಲ್ಲದಿದ್ದರೆ ಶ್ರೀಹರಿಯು ಆ ಪೂಜೆಯನ್ನು ಸ್ವೀಕರಿಸಲಾರ. ಭಾರತೀಯರ ನಿತ್ಯ ಜೀವನದಲ್ಲಿ ಈ ತುಳಸೀವೃಕ್ಷವು ಸತತವಾಗಿ ದೇವಪ್ರಜ್ಞೆ, ಧರ್ಮಪ್ರಜ್ಞೆ, ಸುಖ, ಶಾಂತಿ, ಕಾಂತಿಗಳನ್ನೀಯುವ ಮಹಾಸಂಜೀವಿನಿ ಎಂದು ಹೇಳಬಹುದಾಗಿದೆ.

# ತುಲಸೀ ವಂದನಮ್

ಪಾಪಾನಿಯಾನಿ ರವಿಸೂನು ಪಟಿಸ್ಥಿತಾನಿ
ಗೋಬ್ರಹ್ಮಪಾಲ ಪಿತೃಮಾತೃವಧಾದಿಕಾನಿ
ನಶ್ಯಂತಿ ತಾನಿ ತುಲಸೀವನದರ್ಶನೇನ
ಗೋಕೋಟಿ ದಾನ ಸದೃಶಂ ಫಲ ಮಾಶುಚ ಸ್ಯಾತ್ ॥ 1 ॥

ಲಲಾಟೇಸ್ಯ ದೃಶ್ಯೆತ ತುಲಸೀ ಮೂಲ ಮೃತ್ತಿಕಾ
ಯಮಸ್ತಂ ನೇಕ್ಷಿತುಂ ಶಕ್ತಃ ಮುದೂತಾಭಯಂಕರಾ ॥ 2 ॥

ಪುಷ್ಕರಾದ್ಯಾದಿ ತೀರ್ಥಾನಿ ಗಂಗಾದ್ಯಾಃ ಸರಿತಸ್ತಥಾಃ
ವಾಸುದೇವಾದಯೋ ದೇವಾ ವಸಂತಿ ತುಲಸೀವನೇ ॥ 3 ॥

ತುಲಸೀ ಕಾನನಂಯತ್ರ ಯತ್ರ ಪದ್ಮವನಾನಿಚ
ವಸಂತಿ ವೈಷ್ಣವಾ ಯತ್ರ ತತ್ರಸನ್ನಿಹಿತೋಹರಿಃ ॥ 4 ॥

ಯನ್ಮೂಲೇ ಸರ್ವತೀರ್ಥಾನಿ ಯನ್ಮಧ್ಯೆ ಸರ್ವದೇವತಾಃ
ಯದಗ್ರೇ ಸರ್ವವೇದಾಶ್ಚ ತುಲಸಿ ತ್ವಾಂ ನಮಾಮ್ಯಹಮ್ ॥ 5 ॥

ಪ್ರಸೀದ ತಲಸೀ ದೇವಿ ಪ್ರಸೀದ ಹರಿವಲ್ಲಭೇ
ಕ್ಷೀರೋದಮಥನೋದ್ಭೂತೇ ತುಲಸಿ ತ್ವಾಂ ನಮಾಮ್ಯಹಮ್ ॥ 6 ॥

ಯಾ ದೃಷ್ಟಾ ನಿಖಿಲಾಘ ಸಂಘಶಮನೀ ಸ್ಪೃಷ್ಟಾ ವಪುಃ ಪಾವನಿ
ರೋಗಾಣಾಮಭಿವಂದಿತಾ ನಿರಸನೀ ಸಕ್ತಾಂತಕ–ತ್ರಾಸಿನೀ
ಪ್ರತ್ಯಾಸತ್ತಿವಿಧಾಯಿನೀ ಭಗವತಃ ಕೃಷ್ಣಸ್ಯ ಸಂರೋಪಿತಾ
ನ್ಯಸ್ತಾ ತಚ್ಚರಣೇ ವಿಮುಕ್ತ ಫಲದಾ ತಸ್ಯೈತುಲಸ್ಯೈನವಃ ॥ 7 ॥

ಶುಭಂ ಭವತು

ತುಲಸೀ ಶ್ರೀಸಖಿ ಶುಭೇ ಪಾಪಹಾರಿಣಿ ಪುಣ್ಯದೇ
ನಮಸ್ತೇ ನಾರದನುತೇ ನಾರಾಯಣ ಮನಃಪ್ರಿಯೇ ॥ 8 ॥

- : ಶ್ರೀ ಕೃಷ್ಣಾರ್ಪಣಮಸ್ತು : -

☆ ☆ ☆ ☆

ಆಕಾಶಾತ್ ಪತಿತಂ ತೋಯಂ
ಯಥಾಗಚ್ಛತಿ ಸಾಗರಂ।

ಸರ್ವದೇವ ನಮಸ್ಕಾರಃ
ಕೇಶವಂ ಪ್ರತಿ ಗಚ್ಛತಿ ॥

☆ ☆ ☆ ☆

## ವಿಷ್ಣು ಸ್ತುತಿ

ಶುಕ್ಲಾಂಬರಧರಂ ವಿಷ್ಣುಂ

ಶಶಿವರ್ಣಂ ಚತುರ್ಭುಜಮ್।

ಪ್ರಸನ್ನವದನಂ ಧ್ಯಾಯೇ

ಸರ್ವವಿಘ್ನೋಪಶಾಂತಯೇ ॥

☆ ☆ ☆ ☆

# ಶಂಖದ ಹಿರಿಮೆ

ಪಾಂಚಜನ್ಯಾಯ ಬಿದ್ಮಹೇ। ಪಾವಮಾನಾಯ ಧೀಮಹಿ
ತನ್ನಃ ಶಂಖಃ ಪ್ರಚೋದಯಾತ್

---

ಸಮುದ್ರಗರ್ಭದಿಂದ ಪ್ರಾಪ್ತವಾದ ಶಂಖವು ಭಾರತೀಯರಿಗೆ ಧಾರ್ಮಿಕ ವಿಧಿವಿಧಾನಗಳಲ್ಲಿ ಮಾತ್ರ ಮಹತ್ವಪೂರಿತವಾದುದೆಂದು ಹೇಳುವಂತಿಲ್ಲ. ವೈಜ್ಞಾನಿಕ ಲೋಕದಲ್ಲಿಯೂ ಅದು ತನ್ನ ವ್ಯಾಪ್ತಿಯನ್ನು ಸಾಕಷ್ಟು ಬೆಳೆಸಿಕೊಂಡಿದೆ. ಈ ಮಾತನ್ನು ಅಭ್ಯಾಸಬಲದಿಂದ ತಿಳಿದುಕೊಳ್ಳಬಹುದು.

ಶಂಖವನ್ನು ಕಣ್ಣಿಗೆ ಸ್ಪರ್ಶ ಮಾಡಿಕೊಳ್ಳುವುದರಿಂದ ಕಣ್ಣುಗಳ ಕಾಂತಿಯು ಹೆಚ್ಚುತ್ತದೆ. ಇಂಥ ವೈಜ್ಞಾನಿಕ ಪ್ರಯೋಜನವನ್ನು ಅರಿಯಬೇಕಿದ್ದಲ್ಲಿ ತಾವು ಬಳಸುವ ಪದಾರ್ಥವು ಅಪ್ಪಟವಾದುದೋ ಅಥವಾ ಕೃತ್ರಿಮವಾದುದೋ ಎಂಬುದನ್ನು ತಿಳಿದಿಕೊಳ್ಳಬೇಕಾದುದು ಬಹು ಅಗತ್ಯ.

ವಿಷ್ಣುರೂಪವನ್ನು ಅನಿರುದ್ಧ, ಪ್ರದ್ಯುಮ್ನ, ವಾಸುದೇವ, ನಾರಾಯಣ ಎಂಬ ನಾಲ್ಕು ರೂಪಗಳಲ್ಲಿ ಪೂಜಿಸುವುದುಂಟು. ಎಲ್ಲವೂ ವಿಷ್ಣುರೂಪವೇ. ಈ ಎಲ್ಲ ರೂಪಗಳಲ್ಲಿ ಪ್ರತಿಮೆಗಳ ಕೈಯಲ್ಲಿ ಶಂಖವಿರುವುದನ್ನು ನಾವು ಗಮನಿಸಬಹುದು. ಇನ್ನು ಪ್ರತಿಮಾ ಲಕ್ಷಣ ಹಾಗೂ ಶಿಲ್ಪಶಾಸ್ತ್ರಕ್ಕನುಸಾರವಾಗಿ ಈ ಶಂಖವು ಕೆಲವು ಸಂದರ್ಭದಲ್ಲಿ ಬಲಗೈ ಅಥವಾ ಎಡಗೈಯಲ್ಲಿ ಹಿಡಿದಿರುವ ಚಿತ್ರವನ್ನು ನಾವು ಕಾಣಬಹುದು.

ಶಂಖವು ಶ್ರೀ ಸಾನ್ನಿಧ್ಯದಿಂದ ಯುಕ್ತವಾದುದೆಂದು ಪ್ರತೀತಿ. ಮಹಾಭಾರತದಲ್ಲಿ ಕುರುಪಾಂಡವ ಯುದ್ಧಾರಂಭ ಕಾಲದಲ್ಲಿ ಶ್ರೀಕೃಷ್ಣನೇ ಮೊದಲು ಬಾರಿ ಕುರುಕ್ಷೇತ್ರದಲ್ಲಿ ಎಲ್ಲರಿಗೂ ಕೇಳುವಂತೆ ಶಂಖಧ್ವನಿ ಮಾಡಿದನೆಂಬ ಮಾತು ಗೀತಾಭ್ಯಾಸದಿಂದ ತಿಳಿದುಬರುತ್ತದೆ. ಶ್ರೀಕೃಷ್ಣನ ಶಂಖಧ್ವನಿಯಾದ ನಂತರ ಇನ್ನುಳಿದ ಯೋಧರು ತಮ್ಮ ತಮ್ಮ ಶಂಖಗಳನ್ನು ಧ್ವನಿ ಮಾಡಿದರೆಂಬ ಉಲ್ಲೇಖವಿದೆ.

ಶಂಖಧ್ವನಿಯು ಮಹಾಮಂಗಳಕಾರಕವಾದುದು. ಪರಮ ಪವಿತ್ರವಾದುದು ಎಂಬ ಭಾವನೆಯಿಂದ ಅದನ್ನು ಹೋಮ ಹವನಾದಿ ಕಾರ್ಯ ಗಳಲ್ಲಿಯೂ, ಪೂಜಾದಿ ಕಾರ್ಯಗಳು ನಡೆದಾಗಲೂ, ವಿವಾಹ ಕಾರ್ಯ ದಲ್ಲಿಯೂ ಧ್ವನಿಮಾಡುವ ಸಂಪ್ರದಾಯವಿದೆ. ಅದರಲ್ಲಿಯೂ ಸಹ ಸಮುದ್ರ ಕರಾವಳಿಯ ಪ್ರದೇಶದಲ್ಲಿ ಇದರ ಬಳಕೆ ಹೆಚ್ಚು. ಬಂಗಾಲದಲ್ಲಿ ಸ್ತ್ರೀಯರು ಸಾಮೂಹಿಕವಾಗಿ ಮಂಗಲ ಕಾರ್ಯದಲ್ಲಿ ಶಂಖವನ್ನೂದುವದುಂಟು.

ಶಂಖದಿಂದ ಹೊರಹೊಮ್ಮಿದ ಧ್ವನಿಯು ಎಲ್ಲಿಯುವರೆಗೆ ಪಸರಿಸುತ್ತದೆಯೋ ಅಲ್ಲಿಯವರೆಗೆ ಈ ಪ್ರದೇಶದಲ್ಲಿ ರೋಗಾಣುಗಳೆಲ್ಲ ನಾಶವಾಗುತ್ತವೆ. ಈ ಮಾತನ್ನು ಶ್ರೀ ಜಗದೀಶಚಂದ್ರ ಬಸು ಹೇಳುತ್ತಾರೆ.

ಆಯುರ್ವೇದವು ಪಂಚಮೇದವೆನಿಸಿದೆ. ಈ ಗ್ರಂಥದ ನಾಲ್ಕನೆಯ ಖಂಡದ ಹತ್ತನೆಯ ಅಧ್ಯಾಯದಲ್ಲಿ ಶಂಖದಲ್ಲಿ, ಆಕಾಶ, ವಾಯು, ಜ್ಯೋತಿರ್ಮಂಡಲ ಹಾಗೂ ಸುವರ್ಣಕಾಂತಿ ಯುಕ್ತವಾದುದೆಂದು ಹೇಳಲಾಗಿದೆ.

ಶತ್ರುಗಳನ್ನು ನಿರ್ಬಲಗೊಳಿಸುವ ಶಕ್ತಿ ಅದರ ಧ್ವನಿಯಲ್ಲಿದೆ. ರಾಕ್ಷಸ, ಪಿಶಾಚಿಗಳನ್ನು ಅದು ವಶೀಕರಣಗೊಳಿಸುತ್ತದೆ. ಅಜ್ಞಾನ, ದಾರಿದ್ರ್ಯ ಹಾಗೂ ಸಂಕಟಗಳನ್ನು ನಿವಾರಣೆ ಮಾಡುತ್ತದೆ. ಆಯುಷ್ಯವನ್ನು ಅಭಿವೃದ್ಧಿಗೊಳಿಸುತ್ತದೆ. ಆಯುರ್ವೇದದಲ್ಲಿ ಹೇಳಲಾದ ಈ ಮಾತುಗಳೆಲ್ಲವನ್ನೂ ಇಂದು ವೈಜ್ಞಾನಿಕರೂ ಒಪ್ಪುತ್ತಲಿದ್ದಾರೆ. ಪ್ರಯೋಗಾದಿಗಳಿಂದ ಈ ಮಾತನ್ನು ಸಿದ್ಧಪಡಿಸುತ್ತಿದ್ದಾರೆ.

ಅಯುರ್ವೇದದಂತೆ ಇತರ ಪ್ರಾಚೀನ ಗ್ರಂಥಗಳಲ್ಲಿಯೂ ಕೂಡ ಶಂಖವನ್ನು ಕುರಿತು ವರ್ಣಿಸುವಾಗ ತ್ರಿಲೋಕದಲ್ಲಿರುವ ಎಲ್ಲ ಪುಣ್ಯತೀರ್ಥಗಳು ಇದರಲ್ಲಿ ಉಪಲಬ್ಧವಾಗಿವೆ ಎಂದು ಹೇಳಲಾಗಿದೆ. ಪವಿತ್ರವಾದ ಶಂಖ ಸ್ಪರ್ಶಮಾತ್ರದಿಂದ ಮಾನವನ ಸಕಲ ಪಾಪಗಳು ದೂರವಾಗುವವೆಂದು ಹೇಳಿರುವದುಂಟು.

ದೇವದಾನವರಿಬ್ಬರೂ ಕೂಡಿಕೊಂಡೇ ಸಮುದ್ರ ಮಂಥನ ಕಾರ್ಯವನ್ನಾರಂಭಿಸಿದರು. ಆಗ ಸಮುದ್ರಗರ್ಭದಿಂದ ಹದಿನಾಲ್ಕು ರತ್ನಗಳನ್ನು ಅವರು ಕಂಡರು. ಈ ಹದಿನಾಲ್ಕು ರತ್ನಗಳಲ್ಲಿ ಶಂಖವೂ ಒಂದು. ಅದರಂತೆ ನವನಿಧಿಗಳಲ್ಲಿ ಈ ಶಂಖವೂ ಕೂಡ ಒಂದು ದಿವ್ಯವಾದ ನಿಧಿಯಾಗಿ ಅವರಿಗೆ ಲಭಿಸಿತು.

ಪುರಾಣಗಳಲ್ಲಿಯೂ ಕೂಡ ಶಂಖೋತ್ಪತ್ತಿಯ ವಿಚಾರವನ್ನು ನಾವು ಕಾಣಬಹುದು. ಮಹಾನುಭಾವನಾದ ರುದ್ರ ದೇವ ಒಂದು ಸಂದರ್ಭದಲ್ಲಿ ಶಂಖಚೂಡ ಎಂಬ ದೈತ್ಯನೊಂದಿಗೆ ಹೋರಾಡುವ ಪ್ರಸಂಗವು ಬಂದಿತು. ಆಗ ತನಗೆ ವಿಷ್ಣುವಿನಿಂದ ಕೊಡಲ್ಪಟ್ಟ ತ್ರಿಶೂಲವನ್ನು ಶಂಖಚೂಡನ ಮೇಲೆ ಪ್ರಯೋಗ ಮಾಡಿದನು. ಅದರಿಂದ ಆ ದೈತ್ಯನು ಹತನಾದ. ಮುಂದೆ ಕಾಲಾಂತರದಲ್ಲಿ ಆತನ ಅವಶೇಷಗಳೇ ಶಂಖದ ರೂಪವನ್ನು ತಾಳಿದವು. ಈ ಮಾತು ಬ್ರಹ್ಮವೈವರ್ತ ಪುರಾಣದ ಪ್ರಕೃತಿ ಖಂಡದ ಹದಿನೆಂಟನೆಯ ಅಧ್ಯಾಯದಲ್ಲಿ ನಮಗೆ ಕಾಣಸಿಗುತ್ತದೆ.

ಈ ಶಂಖಗಳಲ್ಲಿ ಪ್ರಧಾನವಾಗಿ ಎರಡು ಪ್ರಕಾರಗಳಿವೆ. ಅದರಲ್ಲಿಯ ಒಂದಕ್ಕೆ ಬಲಮುರಿ ಎಂದು ಕರೆದರೆ, ಇನ್ನೊಂದಕ್ಕೆ ಎಡಮುರಿ ಶಂಖವೆಂದು ಗುರುತಿಸುವದುಂಟು. ಶಂಖದ ಹೊರಭಾಗದ ಶ್ರೀಕಾರವು ಯಾವ ಭಾಗಕ್ಕೆ ತಿರುಗಿಕೊಂಡಿರುತ್ತದೆಯೋ, ಅದರಂತೆ ಅವುಗಳನ್ನು ಕರೆಯುವುದು ಸಂಪ್ರದಾಯ. ಯಾರ ಮನೆಯಲ್ಲಿ ಬಲಮುರಿಯ ಶಂಖವಿರುತ್ತದೆಯೋ ಆ ಗೃಹವು ಮಹಾ ಮಂಗಲಪ್ರದವಾದುದು. ಶಂಖಗಳಿಗೆ ಬಂಗಾರದ ಕವಚ ಹಾಕಿಸಿ ಗಂಧಮಾಲ್ಯಾದಿ ಸುಗಂಧ ದ್ರವ್ಯಾದಿಗಳಿಂದ ಪೂಜೆ ಮಾಡುವು ದುಂಟು.

ಪ್ರತಿದಿನವೂ ವಿಧಿಪೂರ್ವಕವಾಗಿ ಶ್ರದ್ಧಾಭಕ್ತಿಗಳಿಂದ ಶಂಖವನ್ನು ಪೂಜಿಸುವುದರಿಂದ ಶ್ರೀದೇವಿಯ ಅನುಗ್ರಹವು ಲಭಿಸುವದೆಂದು ತಂತ್ರಸಾರದಲ್ಲಿ ಹೇಳಲಾಗಿದೆ. ಹೀಗೆ ಮಾಡಿದಲ್ಲಿ ಸಂತಾನಾಭಿವೃದ್ಧಿಯಾಗುವುದೆಂದು ಹೇಳಿದ್ದಾರೆ. ಈ ಶಂಖ ಪೂಜಾವಿಧಾನದ ಪದ್ಧತಿಯೂ ಇದೆ. ಅದಕ್ಕೆ ಬೀಜಾಕ್ಷರಗಳೂ ಇವೆ.

**ಓಂ, ಹ್ರೀಂ, ಶ್ರೀಂ, ಕ್ಲೀಂ, ಬ್ಲೂಂ**
**ಸುದಕ್ಷಣಾವರ್ತ ಶಂಖಾಯ ನಮಃ**

ಮೂರು ಭಾಗ ಚಿನ್ನ, ಒಂದು ಭಾಗ ಬೆಳ್ಳಿ ಮಿಶ್ರಿತವಾದ ತಗಡು ರಚಿಸಿ ಆ ತಗಡಿನ ಮೇಲೆ ಅಂಡಾಕಾರದಲ್ಲಿ ಈ ಬೀಜ ಮಂತ್ರಾಕ್ಷರಗಳನ್ನು ಬರೆಯಬೇಕು. ನಂತರ ಆ ಮಂತ್ರದ ಮೇಲೆ ಬಲಮುರಿಯ ಶಂಖವನ್ನಿರಿಸಿ ಷೋಡಶೋಪಚಾರಗಳಿಂದ ಪೂಜೆ ಮಾಡಿದಲ್ಲಿ ಶ್ರೀದೇವಿಯ ಅನುಗ್ರಹವಾಗುವುದರಲ್ಲಿ ಸಂದೇಹವಿಲ್ಲ.

ನಿಸರ್ಗವು ಈ ಶಂಖದಲ್ಲಿಯೂ ಕೂಡ ತನ್ನತನದ ಪ್ರಭಾವವನ್ನಿಟ್ಟಿದೆ. ಅವುಗಳಲ್ಲಿಯೂ ಸಹ ಹೆಣ್ಣು ಗಂಡು ಎಂಬ ಪ್ರಭೇದಗಳಿವೆ. ಶಂಖ ಇದು

ಗಂಡು. ಶಂಖಿಣಿ ಎಂಬುದು ಹೆಣ್ಣು. ಒಳ್ಳೆ ಶಂಖವು ಶುಭ್ರವಾಗಿರುತ್ತದೆ. ಬಕುಲಹೂವಿನ ಬಣ್ಣದಾಗಿರುತ್ತದೆ. ಶಂಖಿಣಿಯ ಬಣ್ಣವು ನಸುಗಪ್ಪು. ಅದರ ಮೈಮೇಲೆ ಅಲ್ಲಲ್ಲಿ ಚುಕ್ಕೆಗಳಿರುತ್ತವೆ. ಬಲಮುರಿ ಶಂಖದೊಂದಿಗೆ ಶಂಖಿಣಿಯನ್ನಿಟ್ಟು ಪೂಜೆ ಮಾಡಿದಲ್ಲಿ ಆ ಮನೆಯಲ್ಲಿ ಧನಧಾನ್ಯಾದಿಗಳ ಕೊರತೆ ಎಂದೂ ಕಾಣಲಾರದು. ಬಹುಕಾಲದಿಂದ ಪೂಜಿಸುತ್ತ ಬಂದಿದ್ದ ಶಂಖವು ಸ್ವಲ್ಪ ಭಿನ್ನವಾದರೂ ಸಹ ಅದನ್ನು ಬಿಸಾಡದೆ ಅದಕ್ಕೆ ಬಂಗಾರದ ಹೊದಿಕೆ ಹಾಕಿಸಿ ಪೂಜೆ ಮಾಡಬಹುದು. ಹೀಗೆ ಮಾಡುವುದರಿಂದ ಭಿನ್ನವಾದ ದೋಷವು ದೂರಾಗುವುದೆಂದು ಹೇಳುತ್ತಾರೆ.

ಆಯುರ್ವೇದ ಚಿಕಿತ್ಸಾ ವಿಧಾನದಲ್ಲಿ ಶಂಖದ ಬಳಕೆ ಇದೆ. ಪ್ರಾಚೀನರು ಆದರಿಂದ ಬಹು ಮೌಲ್ಯದ ಔಷಧಿಗಳನ್ನು ಕಂಡುಕೊಂಡಿದ್ದಾರೆ. ಶಂಖಭಸ್ಮ ಸೇವನೆಯಿಂದ ಮೂಕರಿಗೂ ಸಹ ಮಾತು ಬರುತ್ತದೆ. ಮೂಕರಿಂದ ಪ್ರತಿದಿನವೂ ತಪ್ಪದೆ ನಾಲ್ಕು ಗಂಟೆಗಳವರೆಗೆ ಶಂಖವನ್ನೂದಿಸಬೇಕು. ಅಲ್ಲದೇ ಶಂಖದಲ್ಲಿರಿಸಿದ ನೀರನ್ನು ಕುಡಿಯಲು ಕೊಡಬೇಕು. ಇದರಿಂದ ಮೂಕನು ವಾಚಾಳಿಯಾಗುತ್ತಾನೆ ಎನ್ನುವರು.

ಪ್ರಾಚೀನ ಕಾಲದಲ್ಲಿ ಬಾಲ್ಯದಿಂದಲೇ ಮಕ್ಕಳ ಕೊರಳಲ್ಲಿ ಶಂಖವನ್ನು ಕಟ್ಟುತ್ತಿದ್ದರು. ಮಗುವಿಗೆ ಬೇಗನೇ ಮಾತು ಬರಲೆಂದೇ ಹೀಗೆ ಮಾಡುತ್ತಿದ್ದರು. ಇನ್ನು ನಮ್ಮ ಗ್ರಾಮಾಂತರ ನಿವಾಸಿಗಳಾದ ಕೃಷಿಕರು ತಮ್ಮ ಎತ್ತುಗಳ ಕೊರಳಲ್ಲಿಯೂ ಶಂಖಗಳನ್ನು ಕಟ್ಟುವ ಪದ್ಧತಿ ಇರುವುದು. ಇದರಿಂದ ಅವು ಬಲಶಾಲಿಗಳಾಗಿ ನಿರ್ಭೀತಿಯಿಂದ ಬೆಳೆಯುವವಲ್ಲದೆ, ಯಾವುದೇ ತರಹದ ದೃಷ್ಟಿದೋಷವಾಗಲಾರದೆಂಬ ಭಾವನೆಯೇ ಇದಕ್ಕೆ ಕಾರಣವಾಗಿದೆ.

ಸಾಣೆಯ ಕಲ್ಲಿನ ಮೇಲೆ ಶಂಖವನ್ನು ತಿಕ್ಕಿ ಅದರ ರಸವನ್ನು ನೇತ್ರಗಳಿಗೆ ಲೇಪಿಸಿದಲ್ಲಿ ಕಣ್ಣಿನ ಕಾಂತಿಯು ವೃದ್ಧಿಯಾಗುತ್ತದೆ. ರಸವನ್ನು ಮುಖಕ್ಕೆ ಲೇಪಿಸಿಕೊಳ್ಳುವುದರಿಂದ ಮುಖವು ಕಾಂತಿಯುಕ್ತವಾಗಿ ಹೊಳೆಯುತ್ತದೆ.

ಪಾಂಚಜನ್ಯಂ ಹೃಷೀಕೇಶೋ ದೇವದತ್ತಂ ಧನಂಜಯಃ।
ಪೌಂಡ್ರಂಧದ್ಮೌ ಮಹಾಶಂಖಂ ಭೀಮಕರ್ಮಾ ವೃಕೋದರಃ।



ಕೃಷ್ಣನು ಪಾಂಚಜನ್ಯವೆಂಬ ತನ್ನ ಶಂಖವನ್ನು, ದೇವದತ್ತವೆಂಬ ಹೆಸರಿನ ಶಂಖವನ್ನು ಅರ್ಜುನನೂದಿದರೆ, ವೃಕೋದರನು ಪಾಂಡ್ರವೆಂಬ ಶಂಖವನ್ನೂದಿದನು.



ತಿರುಮಲಾಧೀಶನ ನಿತ್ಯಾಲಂಕಾರಗಳಲ್ಲಿ ಸಾಲಿಗ್ರಾಮಗಳ ಮಾಲೆಯಿರುವದನ್ನು ಕಾಣಬಹುದು, ಇದು ಮೈಸೂರಿನ ಮಹಾರಾಜರ ಕೊಡುಗೆಯಾಗಿರುವದು.

ಶಂಖಭಸ್ಮ ಸೇವನೆ ಮಾಡುವುದರಿಂದ ಗುಲ್ಮಶೂಲ, ಪಿತ್ತ, ಪ್ಲೀಹ, ರುಧಿರಾದಿ ರೋಗಗಳ ನಿವಾರಣೆಯಾಗುತ್ತದೆ.

ಮೇಲೆ ವಿವರಿಸಲಾದ ಈ ಎಲ್ಲ ವಿಚಾರಗಳ ಬಗ್ಗೆ ಮನವರಿಕೆಯಾಗಬೇಕಿದ್ದಲ್ಲಿ ನೀವು ಆರಿಸಿಕೊಳ್ಳುವ ಶಂಖವು ಅಪ್ಪಟವಾದುದೋ, ಇಲ್ಲವೇ ಕೃತ್ರಿಮವಾದುದೋ ಎಂಬುದನ್ನು ಪರೀಕ್ಷಿಸುವುದು ಅತಿಮುಖ್ಯ. ಒಳ್ಳೆಯ ಶಂಖಗಳನ್ನು ಕಿವಿಯ ಹತ್ತಿರ ಹಿಡಿದರೆ ಅದರ ನಾದವು ಸಮುದ್ರದ ಅಲೆಗಳಂತಹ ಧ್ವನಿಯನ್ನು ನಾವು ಕೇಳಬಹುದು. ಶಂಖದ ತುದಿಭಾಗವನ್ನು ಬಲಗೈಯಲ್ಲಿ ಹಿಡಿದು ಅದರ ತುದಿಭಾಗವನ್ನು ಸಮ್ಮುಖಕ್ಕೆ ಹೊರಳಿಸಿಕೊಳ್ಳಬೇಕು. ಹಾಗೆ ಮಾಡುವಾಗ ಅದರಲ್ಲಿ ತುಂಬಿದ ನೀರು ಚೆಲ್ಲಬಾರದು. ಆಗ ಮಾತ್ರ ಅದು ಪರಿಶುದ್ಧ ಶಂಖವೆಂದು ಗುರುತಿಸಬಹುದು.

ಇತ್ತೀಚೆಗೆ ಎಲ್ಲ ಕ್ಷೇತ್ರಗಳಲ್ಲೂ ಬಲಮುರಿ ಶಂಖಗಳು ದೊರೆಯುತ್ತಿವೆ. ಇವುಗಳಲ್ಲಿ ಬಹುತೇಕ ಕೃತ್ರಿಮವಾದವುಗಳೇ ಬಹಳ. ಅಂಥವುಗಳನ್ನು ತಂದು ಅವುಗಳನ್ನು ಪೂಜಿಸಿ ಫಲ ಕೊಡಲಿಲ್ಲವೆಂದು ಕೊರಗುವ ಬದಲು ಮೊದಲೇ ಪರೀಕ್ಷಿಸಿ ಶಂಖವನ್ನಾರಿಸಿ ಪೂಜೆ ಮಾಡಿದಲ್ಲಿ ನಿಮಗೆ ಕಲ್ಯಾಣವಾಗುವುದರಲ್ಲಿ ಸಂದೇಹವಿಲ್ಲ.

☆ ☆ ☆ ☆

ಸರ್ವೇ ಭವಂತು ಸುಖಿನಃ
ಸರ್ವೇ ಸಂತು ನಿರಾಮಯಾಃ।

ಸರ್ವೆ ಭದ್ರಾಣಿ ಮಶ್ಯಂತು
ಮಾ ಕಶ್ಚಿದ್ದುಃ ಖಭಾಗ್ಭವೇತ್ ॥

☆ ☆ ☆ ☆

# ಅನುಬಂಧ - 1

## ಸಾಲಿಗ್ರಾಮ ಲಕ್ಷಣಗಳು

1) ಶ್ಯಾಮವರ್ಣ, 2) ಕೃಷ್ಣವರ್ಣ, 3) ಶ್ವೇತವರ್ಣ, 4) ಬಹುವರ್ಣ 5) ಕಪಿಲವರ್ಣ ಎಂದು ವರ್ಣಗಳನ್ನು ಹೇಳಲಾಗಿದೆ.

## ಸಾಲಿಗ್ರಾಮಗಳಲ್ಲಿರುವ ವೈವಿಧ್ಯಗಳು

1) ಮತ್ಸ್ಯ, 2) ಕೂರ್ಮ, 3) ವರಾಹ, 4) ಲಕ್ಷ್ಮೀವರಾಹ, 5) ಭೂವರಾಹ, 6) ನೃವರಾಹ, 7) ಲಕ್ಷ್ಮೀನೃವರಾಹ, 8) ವಿದಾರಣವರಾಹ, 9) ಲಕ್ಷ್ಮೀನೃಸಿಂಹ, 10) ಪಾತಾಳನರಸಿಂಹ, 11) ಕುಕ್ಷಿನರಸಿಂಹ, 12) ಯೋಗಾನರಸಿಂಹ, 13) ವೀರನರಸಿಂಹ, 14) ಕಪಿಲನರಸಿಂಹ, 15) ವಾಮನ, 16) ದಧಿವಾಮನ, 17) ಹ್ರಸ್ವೋನ್ನತ, 18) ವೈಶಾಖ್ಯವಾಮನ, 19) ಜಾಮದಗ್ನಿ, 20) ಬಾಲರಾಮ, 21) ಬಲರಾಮ, 22) ರಾಮಲಕ್ಷ್ಮಣ, 23) ಕೋದಂಡರಾಮ, 24) ಸೀತಾರಾಮ, 25) ಶ್ರೀರಾಮ, 26) ಪಟ್ಟಾಭಿರಾಮ, 27) ಷಟ್‌ಚಕ್ರಸೀತಾರಾಮ, 28) ತ್ರಿಮೂರ್ತಿರಾಮ, 29) ತಾರಕಬ್ರಹ್ಮ, 30) ಪ್ರಲಂಬಘ್ನ, 31) ಸಂಕರ್ಷಣ, 32) ಕೃಷ್ಣಮೂರ್ತಿ, 33) ಶ್ರೀವತ್ಸ ಕೃಷ್ಣಮೂರ್ತಿ, 34) ಬಾಲಗೋಪಾಲ ಮೂರ್ತಿ, 35) ಮದನ ಗೋಪಾಲ, 36) ಸಂತಾನ ಗೋಪಾಲ,37) ಗೋವರ್ಧನ ಗೋಪಾಲ, 38) ಕಾಲಿಯಾ ಮರ್ದನ, 39) ವಿಜಯಸಾರಥಿ, 40) ಸ್ಯಮಂತಕಹರಿ, 41) ಚಾಣೂರಮರ್ದನ 42) ವಿಜಯ ಸಾರಥಿ ಗೋಪಾಲಮೂರ್ತಿ, 43) ವೇಣುಗೋಪಾಲ, 44) ನಿರ್ವಾಣಪದ ಗೋಪಾಲಕೃಷ್ಣ, 45) ಕಲ್ಕಿ, 46) ಬುದ್ಧ, 47) ಕೇಶವ, 48) ಶ್ಯಾಮನಾರಾಯಣ, 49)ಲಕ್ಷ್ಮೀನಾರಾಯಣ, 50) ಮಾಧವ, 51) ಗೋವಿಂದ, 52) ಮಹಾವಿಷ್ಣು, 53) ಮಧುಸೂದನ, 54) ತ್ರಿವಿಕ್ರಮ, 55) ಶ್ರೀಧರ, 56) ಹೃಷೀಕೇಶ, 57) ಪದ್ಮನಾಭ, 58) ದಾಮೋದರ, 59) ವಾಮದೇವ, 60) ಪ್ರದ್ಯುಮ್ನ, 61) ಸಂಕರ್ಷಣ, 62) ಅನಿರುದ್ಧ, 63) ಪುರುಷೋತ್ತಮ, 64) ಅಧೋಕ್ಷಜ, 65) ಅಚ್ಯುತ, 66) ಜನಾರ್ದನ, 67) ಉಪೇಂದ್ರ, 68) ಶ್ರೀಹರಿ, 69) ಶ್ಯಾಮವರ್ಣ, 70) ಹಯಗ್ರೀವ, 71) ಯಜ್ಞಮೂರ್ತಿ, 72) ದತ್ತಾತ್ರೇಯ, 73) ಶಿಂಶುಮಾರ, 74) ಷಣ್ಮುಖ, 75) ಹಂಸ, 76) ಪರಮಹಂಸ,

77) ಪುಂಡರೀಕಾಕ್ಷ, 78) ಲಕ್ಷ್ಮೀಪತಿ, 79) ದೇವದೇವ, 80) ವಟಪತ್ರಶಾಹಿ 81) ನಾಭಿಕಮಲ ವಿಷ್ಣು, 82) ಹರಿಹರ, 83) ಶಂಕರನಾರಾಯಣ, 84) ಸ್ವಯಂಭೂ, 85) ಸ್ವರ್ಣಗರ್ಭ, 86)ಶೇಷಮೂರ್ತಿ, 87) ಗೌರೀನಾಭ, 88) ಶಿವನಾಭಿ, 89) ಅಘೋರ, 90) ಸದ್ಯೋಜಾತ, 91) ಈಶಾನ, 92) ತತ್ಪುರುಷ, 93) ಮಹಿಷಾಕ್ಷ, 94) ಪಾರ್ಥಪ್ರಹಾರ, 95) ಸೂರ್ಯಮೂರ್ತಿ, 96) ವಿಷ್ಣುಪಂಜರ, 97) ಕಾಮಧೇನು, 98) ಸೀತಾರಾಮ, 99) (ಶ್ರೀರಾಮ) ಪಟ್ಟಾಭಿರಾಮ, 100) ಚನ್ನಕೇಶವ .

ಹೀಗೆ ನಮಗೆ ದೊರಕಿದಷ್ಟು ಸಾಲಿಗ್ರಾಮಗಳ ಮಹತಿಯನ್ನು ಸಂಗ್ರಹಿಸಿ ಈ ಪುಸ್ತಕದಲ್ಲಿ ಕೊಡಲಾಗಿದೆ.

## ಅನುಬಂಧ - 2
## ವಿಶೇಷ ಸೂಚನೆ

ಇಂದು ನಾಗರೀಕತೆಯು ಬೆಳೆದಂತೆಲ್ಲ ಪ್ರತಿಯೊಬ್ಬರೂ ತಮ್ಮ ಉದರ ನಿಮಿತ್ತವಾಗಿ ಪ್ರಾಚೀನರು ಹುಟ್ಟು ಬೆಳೆದ ಮನೆಯಿಂದ ದೂರ ಹೋಗಿ ಜೀವಿಸುವ ಪ್ರಸಂಗಗಳು ಬಂದಿವೆ.

ವಂಶ ಪಾರಂಪರ್ಯವಾಗಿ ಬಂದ ಸಾಲಿಗ್ರಾಮಗಳ ಪೂಜೆ ನಿಂತು ಹೋದ ಸಂದರ್ಭಗಳೂ ಇವೆ. ಅಂಥವುಗಳನ್ನು ನಾವು ಸಂಗ್ರಹಿಸಿ ಶ್ರೀಮನ್ನಾರಾಯಣನಿಗೂ ಹಾಗೂ ಆಂಜನೇಯ ಸ್ವಾಮಿಗೂ ಬೆಳ್ಳಿಯಲ್ಲಿ ಮಾಲೆ ಮಾಡಿಸಿ ಕೊಡುವ ವಿಚಾರದಲ್ಲಿದ್ದೇವೆ.

ಸ್ವ ಸಂತೋಷದಿಂದ ಯಾರು ಸಾಲಿಗ್ರಾಮಗಳನ್ನುದಾನಮಾಡುವರೋ ಅಂಥ ಸಾಲಿಗ್ರಾಮಗಳನ್ನು ಸ್ವೀಕರಿಸಲಾಗುವದು.

ಸಾಲಿಗ್ರಾಮಗಳ ಪರೀಕ್ಷೆ ಮಾಡಿಸಲು ಅಪೇಕ್ಷಿಸಿದಲ್ಲಿ ಅಂಥ ಮಹನೀಯರು ಪತ್ರವ್ಯವಹಾರಮಾಡಿ ಮೊದಲೇ ನಿರ್ಧಾರಿತ ಸಮಯದಲ್ಲಿ ಅವುಗಳನ್ನು ತಂದು ತೋರಿಸಿ ಕೊಂಡು ಹೋಗಬಹುದಾಗಿದೆ.

## ಅನುಬಂಧ - 3

## ಪ್ರಣಮ್ಯಚ ಪುನಃ ಪುನಃ

ಅಮೂಲ್ಯವಾದ ಈ ಗ್ರಂಥವನ್ನು ಹೊರತರಲು ಅನೇಕ ಮಹನೀಯರು ಸಹಕರಿಸಿದ್ದಾರೆ.

1. ಶ್ರೀ ದೇವಗಿರಿ ಗುರುಸೇವಾ ಸಮಿತಿ, ಬನಶಂಕರಿ 2ನೇ ಹಂತ, ಬೆಂಗಳೂರು.
2. ಪೂಜ್ಯ ಶ್ರೀ ರಂಗಸ್ವಾಮಿಭಟ್ಟಾಚಾರ್ಯರು, ಪ್ರಧಾನ ಅರ್ಚಕರು, ಕೋಟೆ ಪ್ರಸನ್ನ ವೆಂಕಟರಮಣಸ್ವಾಮಿ ದೇವಸ್ಥಾನ, ಬೆಂಗಳೂರು
3. ಶ್ರೀ ವೈ. ಆರ್ ಕಣ್ಣಭಟ್ಟಾಚಾರ್ಯರು, ಪ್ರಧಾನ ಅರ್ಚಕರು, ಗಾಳಿ ಆಂಜನೇಯಸ್ವಾಮಿ ದೇವಸ್ಥಾನ, ಬೆಂಗಳೂರು.
4. ಶ್ರೀ ಬಿ.ಎಸ್. ಶ್ರೀಧರನಾರಾಯಣ ಭಟ್ಟರು ಪ್ರಧಾನ ಅರ್ಚಕರು, ವೇಣುಗೋಪಾಲ ಸ್ವಾಮಿ ದೇವಾಲಯ, ಬೆಂಗಳೂರು.
5. ಶ್ರೀ ಬಿ. ಆರ್. ಪಟ್ಟಾಭಿರಾಮ ಭಟ್ಟರು, ಪ್ರಧಾನ ಅರ್ಚಕರು, ಲಕ್ಷ್ಮೀನರಸಿಂಹ ದೇವಾಲಯ, ಮಲ್ಲೇಶ್ವರಂ, ಬೆಂಗಳೂರು.
6. ಶ್ರೀ ರಾಘವ ಭಟ್ಟರು, ವಸಂತವಲ್ಲಭರಾಯಸ್ವಾಮಿ ದೇವಸ್ಥಾನ, ಬೆಂಗಳೂರು.
7. ಶ್ರೀ ಎಂ. ಆರ್.ಶ್ರೀನಿವಾಸಭಟ್ಟರು, ಪ್ರಧಾನ ಅರ್ಚಕರು, ಆಂಜನೇಯಸ್ವಾಮಿ ದೇವಸ್ಥಾನ, ಯಲಹಂಕ ಗೇಟ್, ಮೈಸೂರು ಬ್ಯಾಂಕ್ ಸರ್ಕಲ್, ಬೆಂಗಳೂರು.
8. ಶ್ರೀ ಎನ್.ವಿ. ದೊರೆಸ್ವಾಮಿಯವರು ಉಪಾಧ್ಯಕ್ಷರು ಆಗಮತ್ರಯ ಮಹಾಮಂಡಲ, ಬೆಂಗಳೂರು.
9. ಹಿರಿಯರಾದ ಪೂಜ್ಯ ಶ್ರೀ ರಾಮಾ ದೀಕ್ಷಿತರು, ಮ್ಯೂಜಿಯಂ ಮುಂಭಾಗದಲ್ಲಿರುವ ಗಣಪತಿ ದೇವಸ್ಥಾನದ ಪ್ರಧಾನ ಅರ್ಚಕರು, ಕಸ್ತೂರಬಾ ರೋಡ್, ಬೆಂಗಳೂರು.
10. ಶ್ರೀ ಕೆ. ಜಯತೀರ್ಥಾಚಾರ್ಯರು, ಪ್ರಧಾನ ಅರ್ಚಕರು, ಶ್ರೀ ರಾಘವೇಂದ್ರ ಸ್ವಾಮಿ ದೇವಸ್ಥಾನ, ಮಲ್ಲೇಶ್ವರಂ, ಬೆಂಗಳೂರು.
11. ಶ್ರೀ ವೆಂಕೋಬಾಚಾರ್ಯ, ಅರ್ಚಕರು, ಆಂಜನೇಯಸ್ವಾಮಿ ದೇವಸ್ಥಾನ, ಮಲ್ಲೇಶ್ವರಂ, ಬೆಂಗಳೂರು.
12. ಶ್ರೀ ಗೋವಿಂದಮೂರ್ತಿ ದೇಸಾಯಿಯವರು, ಬಸವೇಶ್ವರನಗರ, ಬೆಂಗಳೂರು.

13. ಶ್ರೀ ಎಂ.ಎಂ. ರಾಯಚೂರು, ನಿವೃತ್ತ ಇಂಜಿನಿಯರು, ಪ್ರಾಚ್ಯವಸ್ತು ಸಂಶೋಧನ ಇಲಾಖೆ, ಬೆಂಗಳೂರು.
14. ಶ್ರೀ ಕೆ.ವಿ. ಅಶ್ವತ್ಥನಾರಾಯಣರಾಯರು, ಮ್ಯಾನೇಜಿಂಗ್ ಟ್ರಸ್ಟಿ, ಜ್ಞಾನಮಂದಿರ ಟ್ರಸ್ಟ್, ಹಾಗೂ ಸುದರ್ಶನ ವಿದ್ಯಾಮಂದಿರ, ಬೆಂಗಳೂರು.
15. ಶ್ರೀ ಎ.ಎಲ್ ಬದರೀನಾಥ, ಪ್ರಧಾನ ಅರ್ಚಕರು, ಕಾರಂಜಿ ಅಂಜನೇಯಸ್ವಾಮಿ ದೇವಸ್ಥಾನ, ಬೆಂಗಳೂರು.
16. ಶ್ರೀ ಹೆಚ್. ಟಿ ಗೋಪಾಲರಾವ್, ಸಂಚಾಲಕರು, ವಿಷ್ಣನ್ ಟ್ರಾವಲ್ಸ್, ಬೆಂಗಳೂರು.
17. ಶ್ರೀ ಅನಂತ ಆಗರಖೇಡ, ಮುಲುಂಡ, ಬಾಂಬೆ
18. ಶ್ರೀ ಅನಂತರಾವ್ ದೇಸಾಯಿ, ವಾಚ್ ಡೀಲರ್, ವಿಜಾಪುರ
19. ಡಾ ॥ ಶ್ರೀ ಆರ್ . ಜಿ. ಮಂಗಲಗಿ, ವಿಜಾಪುರ
20. ಡಾ ॥ ಶ್ರೀ ಎಂ. ಎಂ. ಜೋಶಿ, ಪದ್ಮನಯನಾಲಯ, ಹುಬ್ಬಳ್ಳಿ.
21. ಶ್ರೀ ಗುತ್ತಲ ಶ್ರೀನಿವಾಸಾಚಾರ್ಯ, ರಾಜಾಜಿನಗರ, ಬೆಂಗಳೂರು.
22. ಶ್ರೀ ಎಸ್. ಆರ್ ಆಚಾರ್ಯ, ಸಂಚಾಲಕರು, ಆಚಾರ್ಯ ಪಾಲಿಟೆಕ್ನಿಕ್ ಸಂಸ್ಥೆ, ಬೆಂಗಳೂರು.
23. ಡಾ ॥ ಶ್ರೀ ಜಿ. ಬಿ. ಆದ್ಯ, ಗುಲಬುರ್ಗಾ
24. ಸನ್ಮಾನ್ಯ ಕೊಪ್ಪರೇಶ, ವಿಜಯನಗರ, ಬೆಂಗಳೂರು.
25. ಶ್ರೀ ಈ. ಎಲ್. ವೆಂಕಟೇಶಯ್ಯ, ಎಲ್ಲೋರಾ ಜ್ಯುವೆಲರೀಸ್ ಪ್ಯಾಲೇಸ್, ಅವೆನ್ಯೂ ರೋಡ್, ಬೆಂಗಳೂರು.
26. ಶ್ರೀ ಧರ್ಮರಾವ್ ಕುಲಕರ್ಣಿ ಮುಂಬಯಿ

## ಅನುಬಂಧ - 4

## ಗ್ರಂಥ ಋಣ

1. ಆಗಮಸಾರ - ಬಿ. ಭೀಮರಾವ್
2. ಪುರಂದರದಾಸರ ಕೀರ್ತನೆಗಳು - ಸುಭೋದ ರಾಮರಾವ್
3. ಮಹಾಭಾರತ ತಾತ್ಪರ್ಯ ನಿರ್ಣಯ- ವರದ ರಾಜೀಯ

4. ತಂತ್ರಸಾರಪೂಜಾ ವಿಧಾನ - ಮಧ್ವಾಚಾರ್ಯರು
5. ನಿತ್ಯಾಹ್ನಿಕ ಪದ್ಧತಿ - ಉಡುಪಿ ಪ್ರಕಾಶನ
6. ಗೋರಖಪುರದಿಂದ ಪ್ರಕಟವಾಗುವ ಕಲ್ಯಾಣ ಮಾಸ ಪತ್ರಿಕೆಯ ಸಂಚಿಕೆಗಳು
7. ತುಲಸಿ ಮಹಿಮಾ - ಆಚಾರ್ಯ ದ್ವಿವೇದಿ
8. ಧರ್ಮಯುಗ - ಹಿಂದೀ ಮಾಸಪತ್ರಿಕೆ
9. ಶ್ರೀ ಪೂಜ್ಯ ಎಸ್.ಕೆ. ರಾಮಚಂದ್ರರಾಯರಿಂದ ರಚಿತವಾದ ಸಾಲಿಗ್ರಾಮ ಸಾಹಿತ್ಯ ಗ್ರಂಥಗಳು ಹಾಗೂ ಭಾವ ಚಿತ್ರಗಳು
10. ಆಲಯ ಅರ್ಚನ - ಸವ್ಯಸಾಚಿ
11. ಪ್ರಾಣಾಯಾಮ ದೀಪಿಕಾ - ಬಿ.ಕೆ. ಎಸ್. ಅಯ್ಯಂಗಾರ್

## ಅನುಬಂಧ – 5

## ವರದರಾಜ ಪ್ರಕಾಶನ

ನಂ. 114ವೈ, 4ನೇ ಮೈನ್, 4ನೇ ಫಟ್ಟ, 7ನೇ ಬ್ಲಾಕ್,
ಬನಶಂಕರಿ 3ನೇ ಹಂತ, ಬೆಂಗಳೂರು-58 ದೂರವಾಣಿ : 6692139

### ಶ್ರೀ ಆದ್ಯ ರಾಮಾಚಾರ್ಯರ ಐತಿಹಾಸಿಕ ಕಾದಂಬರಿಗಳು

| | | ರೂ. ಪೈ. |
|---|---|---|
| ಜೈ ಭವಾನಿ | ... | 60.00 |
| ಶ್ರೀಸಮರ್ಥ | ... | 30.00 |
| ಸೂರ್ಯಾಸ್ತ | ... | 35.00 |
| ವಿಜಾಪುರದ ಪತನ | ... | 25.00 |
| ಶಂಭೂ | ... | 25.00 |
| ವಿಕ್ರಾಂತ ಕೇಸರಿ | ... | 25.00 |
| ಮಾತೃಛಾಯಾ | ... | 20.00 |
| ಹನುಮಧ್ವಜ ಹಾರಿತು | ... | 35.00 |



ಶುಭಂ ಭವತು

## ಶ್ರೀ ಆದ್ಯ ರಾಮಾಚಾರ್ಯರ ಸಂಶೋಧನಾತ್ಮಕ ಕೃತಿಗಳು

| | | |
|---|---|---|
| ಪುಂಡರೀಕ ವಿಠ್ಠಲ | ... | 20.00 |
| ಶ್ರೀ ಕೃಷ್ಣದ್ವಾರಕಾ | ... | 5.00 |
| ಕಾಶ್ಮೀರದ ಜ್ವಾಲಾಮುಖಿ | ... | 25.00 |

## ಶ್ರೀ ಆದ್ಯ ರಾಮಾಚಾರ್ಯರ ಪೌರಾಣಿಕ ಕಾದಂಬರಿಗಳು

| | | |
|---|---|---|
| ರಾಧೇಯ | ... | 75.00 |
| ಧನಂಜಯ | ... | 30.00 |
| ಆಚಾರ್ಯ ದ್ರೋಣ | ... | 35.00 |
| ಪ್ರಸನ್ನ ವೆಂಕಟ ? | ... | 20.00 |
| ಭಾರತೀಯ ಮುಸಲ್ಮಾನ ಶೋಧ ಹಾಗೂ ಬೋಧ | ... | 25.00 |
| ಉಮಾಪತಿ | ... | 7.00 |
| ಮಾಟಮಂತ್ರ | ... | 10.00 |
| ಉರ್ದು ಕಾದಂಬರಿ "ಉಮರಾವ್‌ಜಾನ್" | ... | 10.00 |
| ಮನೆಯ ತೋಟ | ... | 25.00 |
| ಪಾಂಚಾಲಿ (ಪೌರಾಣಿಕ ಕಾದಂಬರಿ) | ... | 40.00 |
| ರಾಜವೃಕೋದರ (ಪೌರಾಣಿಕ ಕಾದಂಬರಿ) | ... | 35.00 |



ನಮೋ ನಮಸ್ತೆ ಅಖಿಲ ಕಾರಣಾಯ
ನಾರಾಯಣಾರ್ತಿ ವಿನಾಶನಾಯ।

ಸರ್ವಾಗಮಾ ಮ್ನಾಯ ಮಹಾರ್ಣವಾಯ
ನಮೋಽಪವರ್ಗಾಯ ಪರಾಯಣಾಯ॥

ಶುಭಂ ಭವತು